ಅದೇಬಾನು, ಅದೇಭಾನು,
ಅದೇನಾನು, ಅದೇನೀನು,
ಆದರು ಇದು ಹೊಸದಿನ
ಇದರ ತಿರುಳೆ ಹೊಸತನ !

ಆನಂದಕಂದ

# ನನ್ನ ನುಡಿ



ನಾನು ಮೊದಲಿನಿಂದಲೂ ಹಳಗನ್ನಡ ಕಾವ್ಯಗಳನ್ನು ಓದುವ ಪರಿವಾರ ವಿಷ್ಟವನು. ನನಗೆ ಇದರ ಪರಿಣಾಮುವಾಗಿಯೋ ಅಥವಾ ಮತ್ತಾವ ಕಾರಣಕ್ಕಾಗಿಯೋ ಕವನಗಳನ್ನು ಬರೆಯಬೇಕೆಂಬ ಆಶೆಯಾಯಿತು. ಅವನ್ನು ಕಾರ್ಯರೂಪಕ್ಕೆ ಇಳಿಸುತ್ತಹೋದಂತೆ ಅನೇಕ ಕವನಗಳು ರೂಪುಗೊಂಡವು. ನಾನು ಇವುಗಳನ್ನು ಯಾರಕಣ್ಣಿಗಾದರೂ ಹಾಕಬೇಕೆಂದು ವಿಚಾರಿಸುತ್ತಿರುವಾಗನನ್ನ ತರುಣ ಮಿತ್ರರಾದ ಶ್ರೀ. ಬಿ. ಆರ್. ವಾಡಪ್ಪಿ, M· A· B· T· ಇವರು ಕುತೂಹಲದಿಂದ ನನ್ನ ಕವನಗಳನ್ನು ಓದುವೆನೆಂದು ಹೇಳಿದರು. ನನಗೆ ಆಗ ತುಂಬಾ ಸಂತೋಷವಾಯಿತು. ಅವರು ಅವುಗಳನ್ನು ಓದಿ "ಇವು ನಿಜವಾಗಿಯೂ ಪ್ರಕಟಿಸುವದಕ್ಕೆ ಯೋಗ್ಯವಿವೆ; ನಿಮ್ಮ ಅಲ್ಪ ಕಾಣಿಕೆಯೆಂದು ಕೊಟ್ಟುಬಿಡಿರಿ" ಎಂದು ಹೇಳಿದರು. ಅಂತೆಯೇ ನಾನುಹಿರಿಯರಾದ ಪಂಡಿತ ಪೂಜಾರವರನ್ನು ಕೇಳಿದೆ ಅವರ ಅಭಿಪ್ರಾಯುವಾದರೂ ಹಾಗೆಯೇ ಇದ್ದುದರಿಂದ ಈ ಕವನ ಸಂಕಲನವನ್ನು ಕನ್ನಡಿಗರೆದುರಿಗೆ ವಿನಯದಿಂದ ಇಡುತ್ತಿದ್ದೇನೆ. ಓದುಗರು ಇವುಗಳನ್ನು ಒಮ್ಮೆ ಓದಿ ಹರ್ಷಬಟ್ಟರೆ ನನ್ನ ಪ್ರಯತ್ನ ಸಫಲವಾಯಿತೆಂದು ತಿಳಿಯುತ್ತೇನೆ

ಈ ಪುಟ್ಟ ಪುಸ್ತಕದ ವಿಷಯುವನ್ನು ಪವಣಿಸುವಲ್ಲಿ ಒಂದು ವಿಧವನ್ನು ಕೈಕೊಳ್ಳಲಾಗಿದೆ. ದೇವತಾಸ್ತುತಿ, ಚಂದ್ರಪ್ರಹಾಸ, ಧನ, ದಾರಿದ್ರ್ಯ, ಸಂಸ್ಕೃತ ಶ್ಲೋಕಗಳ ಭಾವಾನುವಾದ ಹಾಗು ವಿಶೇಷಭಾವ ಹೀಗೆ ವಿಷಯ ವೈವಿಧ್ಯದಕಡೆಗೆ ಹೆಚ್ಚು ಗಮನಕೊಟ್ಟಿದ್ದೇವೆಂಬುದನ್ನು ಸಹೃದಯ ವಾಚಕರು ಒಪ್ಪುವರಾಗಿ ಆಶಿಸುತ್ತೇನೆ. ಇನ್ನು "ಚಂದ್ರಪ್ರಹಾಸ"ಎಂಬ ಸುದೀರ್ಘ ಕವನದ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವದು ಅವಶ್ಯ. ಇಲ್ಲಿಯ

ವಿಷಯುವೇನೋ ತೀರ ಪುರಾತನವಾದುದು. ಆದರೆ ಅದನ್ನು ಇಲ್ಲಿ "ದುಂಡು ಮಲ್ಲಿಗೆ"ಯ ಧಾಟಿಗೆ ತಿರುಗಿಸಿಕೊಂಡಿದ್ದೇನೆ. ಸರಾಗವಾಗಿ ಅನ್ನುವದಕ್ಕೆ ಒಂದು ಅನುವು ದೊರೆತೀತೆಂದು ನನ್ನ ನಂಬುಗೆ.

ಶ್ರೀಮಾನ್. ಪಂಡಿತ ಪೂಜಾರ ಇವರು ಈ ಗ್ರಂಥವನ್ನೋದಿ ಮುನ್ನುಡಿ ಬರೆದು ಕೊಟ್ಟುದುದಕ್ಕಾಗಿ ಅವರಿಗೆ ನಾನು ತುಂಬಾ ಉಪಕೃತ ನಾಗಿದ್ದೇನೆ. ನನಗೆ ಈ ಕಾರ್ಯದಲ್ಲಿ ನೆರವನ್ನಿತ್ತ ಶ್ರೀ. ವಾಡಪ್ಪಿಯವರನ್ನೂ ಹಾಗು ಉತ್ತಮವಾಗಿ ಮುದ್ರಿಸಿ ಪ್ರಕಟಿಸಿದುದಕ್ಕಾಗಿ ಭಾರತ ಮುದ್ರ ಣಾಲಯದ ಒಡೆಯರಾದ ಶ್ರೀ. ಬಿ. ಎನ್. ಹುದ್ದಾರರನ್ನೂ ಮರೆಯಲಾರೆ.

೧೬-೩-೫೩
ಧಾರವಾಡ.

ಎನ್. ಎನ್. ಜವಳಿ.

# ಮುನ್ನುಡಿ



**ಶ್ರೀ. ನಾ. ನ. ಜವಳಿ ಮಾಸ್ತರರು,** ತಾವು ರಚಿಸಿದ ಕವಿತೆಗಳನ್ನು ಆಗಾಗ ನನ್ನ ಬಳಿಯಲ್ಲಿ ಓದಿ ತೋರಿಸುತ್ತಿದ್ದರು. ಈಚೆಗೆ ಹಲವು ಕವಿತೆಗಳನ್ನು ರಚಿಸಿದರು. ಅವುಗಳನ್ನು ಪ್ರಕರಣಗಳಾಗಿ ವಿಭಾಗಿಸಿದರು. ಅವಕ್ಕೊಂದು ಕವಿತಾಗ್ರಂಥದ ಸ್ವರೂಪವನ್ನು ತಂದರು. ಕಾವ್ಯರಸಾಕಾಂಕ್ಷಿ ಜನರ ಮನಸ್ತೃಪ್ತಿಯ ಸಲುವಾಗಿ.

ಈ ಕವಿತೆಗಳೆಲ್ಲ ಪ್ರಾಚೀನಮಾರ್ಗದ ಅನುಸರಣವನ್ನು ಅವಲಂಬಿಸಿವೆ. ಕವಿತ್ವಗುಣಗಳು ಅಲ್ಲಲ್ಲಿ ಧಾರಾಳವಾಗಿ ಕಂಡು ಬರುತ್ತಿವೆ. ಕವಿತಾಗ್ರಂಥಗಳು **ಮಾರ್ಗದಲ್ಲಿ ಇರುವಂಥವು** ಬಹಳಮಾಡಿ ಅಪರೂಪವಾಗಿ ಹೊರಬೀಳುತ್ತಿರುತ್ತವೆ. ಶ್ರೀ. ಜವಳಿಯವರಂಥ ಸುಸಂಸ್ಕೃತ ಅನುಭವಿಕ ಕವಿಗಳು ಸ್ವಕೃತ ಕವಿತೆಗಳನ್ನು "ನಮ್ಮ ಕವಿತೆಗಳೇನು ಒಳ್ಳೆಯವು?" ಎಂದು ಸಂಕೋಚಕ್ಕೊಳಗಾಗದೆ ಪ್ರಕಟಿಸಿ ಕವಿತಾನುರಾಗಿಗಳ ಮೇಲೆ ಪರಮೋಪಕಾರವನ್ನು ಮಾಡಿರುವರು.

ಈ ಕವಿತೆಗಳು ಭಾಷಾಶುದ್ಧಿಯನ್ನು ಮುಖ್ಯವಾಗಿ ಅವಲಂಬಿಸಿ ಭಾಷಾದ್ರೋಹಕ್ಕೊಳಗಾಗದೆ ವಿವಿಧ ಭಾವಗಳನ್ನೊಳಗೊಂಡವೆ. ಶ್ರೀ. ಜವಳಿಯವರು ಇಂಥ ಅನೇಕ ವಿಷಯಗಳ ಕವಿತೆಗಳನ್ನು ಪ್ರಕಟಿಸಿ ತಮ್ಮ ಕವಿತಾ ಸಾಮರ್ಥ್ಯವನ್ನು ತೋರ್ಪಡಿಸಿದ್ದಕ್ಕಿಂತ ಕವಿತಾನುರಾಗಿ ವಾಚಕರು ಶ್ರೋತಾರರು ಇವರ ಮೇಲೆ ಉಪಕಾರವನ್ನು ಮಾಡಿರುವರೆಂದು ನಾನು ತಿಳಿಯುತ್ತೇನೆ.

ಇನ್ನು ಪರಿಪಕ್ವದಿಶೆಯನ್ನು ಹೊಂದುತ್ತಿರುವ ನಮ್ಮ ಕವಿತ್ವ ಸಾಮರ್ಥ್ಯದ ಉಪಯೋಗವನ್ನು ನಮ್ಮ ನಾಡಿನ ಜನರಿಗೆ ಮಾಡಿಕೊಡುವಲ್ಲಿ ನಿರತರಾಗುವರೆಂದು ಹಾರೈಸುತ್ತೇನೆ.

**ಮ. ಪ್ರ. ಪೂಜಾರ.**

**ಧಾರವಾಡ,**

ನಂದನ ಕಾರ್ತಿಕ ಶು. ಪ್ರತಿಪದೆ.

ದಿನಾಂಕ. ೧೯-೧೦-೫೨

# ಪರಿವಿಡಿ



॥ ಶ್ರೀ ॥

# ದೇವತಾಸ್ತುತಿ



ಸ್ರ ॥

ಶ್ರೀನಾಥಂ ಸದ್ಗುಣಾಢ್ಯಂ ನಿರುಪಮಸುಖದಂ ಮೇಘವರ್ಣಂ ಮುಕುಂದಂ ।
ಭೂನುತ್ಯಂ ಪದ್ಮನೇತ್ರಂ ಕಮಲಭವಪಿತಂ ಕೌಸ್ತುಭಾಂಕಂ ರಮೇಶಂ ॥
ಸಾನಂದಂ ಭಕ್ತಪಾಲಂ ಜಲನಿಧಿಶಯನಂ ಸರ್ವದಾ ಶೋಕದೂರಂ ।
ದೀನವ್ರಾತಾಬ್ಜಸೂರ್ಯಂ ಹರಿಕುಡುಗೆಮಗಾನಂದಮಂ ನಿರ್ಜರೇಶಂ ॥ ೧ ॥

ಮ. ಸ್ರ ॥

ವನಮಾಲಾಭೂಷಿತಾಂಗಂ ಕುಸುಮಶರಪಿತಂ ಪೀತವಾಸಂ ಪುರಾಣಂ ।
ಘನವರ್ಣಂ ವಿಶ್ವನಾಥಂ ಪುರಾಣಂ ಸಮುದದನುಜಸಂಹಾರಕಂ ಪಕ್ಷಿವಾಹಂ ॥
ವನಜಾಕ್ಷಂ ಪದ್ಮನಾಭಂ ಭವಭಯಹರಣಂ ಶಿಷ್ಟಪಾಲಂ ಸುರೇಶಂ ।
ಅನಘಂ ಲಕ್ಷ್ಮೀವಿಲೋಲಂ ನಿರುತ ಪೊರೆವನೆಮ್ಮಂ
ಸರ್ವಲೋಕೈಕನಾಥಂ ॥ ೨ ॥

ಶ್ರೀಮದ್ವಾರಿಧಿ ತನುಜಾ !
ಕೋಮಲ ಮುಖಕಮಲ ಮಧುರಚುಂಬನಸಂತೋ ॥
ಷಾವೃತ ವಾರಿಧಿ ಹಿಮಕರ ।
ದಾಮೋದರನೀಗೆ ಸುಖವನಸುನಯದಿಂದಂ ॥ ೩ ॥

ಉತ್ಪಲ ॥

ವೇದಗಳನ್ನು ತಂದಗವ ತಾಳುತೆ ಸ್ಥಾಪಿಸಿ ಮತ್ತೆ ಭೂಮಿಯಂ ।
ಬಾಧಿಸಿ ದೈತ್ಯನಂ ಬಲಿಯ ಮೆಟ್ಟುತೆ ಕೊಲ್ಲುತೆ ಕ್ಷಾತ್ರವರ್ಗಮಂ ॥
ಕಾದುತೆ ಕೊಂದು ರಾವಣನ ಪಾರ್ಥನ ಕಾಯ್ದು ಬಲಾವೃತಾದ್ರಿಯಂ ।
ಛೇದಿಸಿ ವಾಹವೇರಿ ಸುಖಮಂ ಜಗಕಿತ್ತಿಹ ಶ್ರೀಶ ಕಾಯ್ಗುವಂ ॥ ೪ ॥

ಸು ||

ಗೋನಾಮಾಸುರ ರಿಪುವಂ ।
ಗೋನಾಥಪವಿತ್ರಮಂತ್ರಸಂಭವ ಹಿತನಂ ||
ಗೋನಿಚಯಾಂಬುಧಿ ಶಶಿಯಂ ।
ಗೋನಂದನವೈರಿಸಖನ ಹರಿಯಂ ನಮಿಪೆಂ || ೫ ||

ಸಿರಿಯಿರ್ಪ ನರರು ತಿಳಿಯರು ।
ಧರೆಯೊಳು ಬಡವರಿಗೆ ತಾಪಮಾಗುತ್ತಿಹುದಂ ||
ಉರಗವು ಭೂಮಿಯ ಹೊತ್ತುದ ।
ನರಿಯದೆ ಸಿರಿಯೊಡನೆ ಮಲಗಿದಾ ಹರಿ ಪೊರೆವಂ || ೬ ||

ಮತ್ತೇಭ ||

ಇರುವಳ್ಭಾರ್ಯೆಯು ಭೂಮಿಯೊಬ್ಬಳಬಲಳ್ ಮತ್ತೋರ್ವ ಶ್ರೀಕಾಂತೆಯು ।
ನಿರುತಂ ಚಂಚಲಳಾಗಿಹಳ್ ತ್ರಿಜಗಮಂ ಗೆಲ್ಲುತ್ತಲಿರ್ಪೀಸುತಂ ||
ದುರುಳಂ ವಾಹನ ಪನ್ನಗಾರಿಶಯನಂ ವಾರಾಶಿ ಶಯ್ಯಾತಲಂ ।
ಸ್ಮರಿಸುತ್ತೀಗ್ರಹಸೌಖ್ಯಮಂ ಸೊರಗಿದಾ ಶ್ರೀಶಂ ಸದಾ ಕಾಯುವಂ || ೭ ||

ಮತ್ತೇಭ ॥

ಸಿರಿಯಾಣ್ಮಂ ಖಗವನ್ನು ಹತ್ತಿ ಬರುವೀ ವೃತ್ತಾಂತಮಂ ಕೇಳಿ ಶ್ರೀ ।
ಪರಮೇಶಂ ಫಣಿಯಿಂದೆ ಕಟ್ಟಿ ಕಟಿಯೊಳ್ ಕೌಪೀನದಿಂ ಬಂದಿರಲ್ ॥
ಉರಗೇಂದ್ರ ಖಗವನ್ನು ನೋಡಿ ಭಯದಿಂ ಬೀಳಲ್ಕೆ ಕೌಪೀನವು ।
ಭರದಿಂ ಪೋಗಲು ನಗ್ನನಾದ ಶಿವನೀಗೆಮ್ಮಂ ಸದಾ ಕಾಯುವಂ ॥ ೮ ॥

ಶ್ರೀಮದ್ವರಗಿರಿತನುಜಾ ।
ಕಾಮಿತಸುಖಭೋಗ ದಾನಲೋಲಂ ಭಕ್ತ ॥
ಸ್ತೋಮಾವೃತ ಪರಮೇಶಂ ।
ಸೋಮಾಂಕಂ ಗಿರಿಶನೀವ ಸುಖಮಂ ದಯೆಯಿಂ ॥ ೯ ॥

ಮ ವೃ

ಗಿರಿಜಾವಾಹನ ಸಿಂಹಸೀಳಬಯಸಲ್ ಮಾರಾರಿ ವೃದ್ಧೋಕ್ಷಮಂ ।
ಪರಮಾತ್ಮೋರಗನುಂಗಲಿಕ್ಕೆ ತುಡುಕಲ್ ನಾಗಾಸ್ಯಪತ್ರಾಖುವಂ ॥
ವರಷಡ್ವಕ್ತ್ರನಕೇಕಿ ತುಂಡಿಸುತಿರಲ್ ರಾಜಾಂಕ ಕಂಠಾಹಿಯಂ ।
ನಿರುತಂ ನೋಡದೆ ಗೇಹಮಂ ತ್ಯಜಿಸಿದಾ ರುದ್ರಂ ಸದಾ ಕಾಯುವಂ ॥ ೧೦ ॥

ವಿಷವನ್ನು ಕುಡಿದು ಸುಖದಿಂ ।
ಮಸಣದೆ ವಾಸಿಸುತ ಗಜದ ಚರ್ಮವ ಪೊದ್ದಾ ॥
ಬುಸುಗುಡುವಹಿಯಂ ಕಟ್ಟಿದ ।
ತಿಸುಳಿಯು ನಮಗೀಗೆ ಸುಖವನನುನಯದಿಂದಂ ॥ ೧೧ ॥

ಪೆರೆಯಿಂ ಫಣಿಯಿಂ ಬಾ ।
ನರಸಿಂದಂ ಭಸ್ಮದಿಂದೆ ಮಂದಾಕಿನಿಯಿಂ ॥
ವಿರಚಿಸಿದ ಪವರ್ಗಶಿವಂ ।
ನಿರುತದೊಳಪವರ್ಗವೀವ ಗಿರಿಶಂ ಪೊರೆವಂ ॥ ೧೨ ॥

ಉರಗವಿಷದೆ ಭೀತಿಯು ಚಂ ।
ದಿರನಮೃತದೆ ಪ್ರೀತಿಯುಮುಮುಶೌಚಮುದಿಲ್ಲಂ ॥
ಧರಿಸಿಹೆ ಕಪಾಲದಿಂದಂ ।
ಸುರನದಿಯಿಂ ಶೌಚಮಿಲ್ಲದೀಶಂ ಪೊರೆವಂ ॥ ೧೩ ॥

ಚಂದ್ರಾನನಾರ್ಧ ದೇಹನ ।
ಚಂದ್ರಾನಲ ವಾರಿಜಾತಮಿತ್ರಾಂಬಕನಂ ॥
ಚಂದ್ರಾರ್ಧಕಲಾಧರನಂ ।
ಚಂದ್ರಸುಧಾವಚ್ಛಿತಾಂಗ ಶಿವನಂ ಭಜಿಪೆಂ ॥ ೧೪ ॥



ಮ. ಸ್ರ ॥.

ಕರಿವಕ್ತ್ರಂ ವಿಘ್ನನಾಶಂ ಸದಮಲರದನಂ ಪೀನಗಾತ್ರಂ ಗಣೇಶಂ ।
ಸುರಸೇವ್ಯಂ ವಕ್ರತುಂಡಂ ವರಕುಧರಸುತಾಪಾರ್ವತೀಪ್ರೇಮಪುತ್ರಂ ।
ನರಪೂಜ್ಯಂ ಭಾನುತೇಜಂ ಸುಖದಶಿವಸುತಂ ಸರ್ವದಾ ಶೋಕದೂರಂ ।
ವರದಂ ಭೂತಾಳಿಪಾಲಂ ಪೊರೆಯಲಿ ಸತತಂ ಮೂಷಕಾರೂಢನೆನ್ನಂ ॥ ೧೫ ॥

ವಿಘ್ನಾರಣ್ಯಾನಿಲನಂ ।
ವಿಘ್ನೋತ್ತುಂಗಾಗ ಸಂಹರಣಪವಿಧರನಂ ॥
ವಿಘ್ನೇಭಾಂತಕ ಹರಿಯಂ ।
ವಿಘ್ನೇಶ್ವರನನ್ನು ಭಜಿಪೆ ನಾ ಮುದದಿಂದಂ ॥ ೧೬ ॥

ವಿಘ್ನೌಘಾಸುರರಿಪುವಂ ।
ವಿಘ್ನಾಂಭೋನಿಧಿಯ ಪೀರ್ವವಡವಾನಲನಂ ॥
ವಿಘ್ನತಿಮಿರಾರಿ ರವಿಯಂ ।
ವಿಘ್ನೇಶ್ವರನನ್ನು ಮುದದಿ ಕುಂಬಿಡುತಿರ್ಪೆಂ ॥ ೧೭ ॥

ಗಿರಿಜಾತನುಮೃಜ್ಜಾತನೆ ।
ಪುರಹರನಂದನನೆ ವಿಘ್ನವಿಧ್ವಂಸಕನೇ ॥
ನಿರುತದಿ ಕಂಟಕಜಾಲವ ।
ಪರಿಹರಿಸಿಮಗಿನಿದು ನೀಡು ವಾರಣವದನಾ ॥ ೧೮ ॥

ವಾರಣವದನನೆ ವಿಘ್ನ ವಿ ।
ದೂರನೆ ಜಂಬೂಕಪಿತ್ಥಫಲ ಭಕ್ಷಕನೇ ॥
ಗೌರೀ ತನುಸಂಭವನೇ ।
ಕಾರುಣ್ಯಾಂಬೋಧಿ ಗಣಪ ನಿನ್ನಂ ಭಜಿಪೆಂ ॥ ೧೯ ॥



ಮತ್ತೇಭ ॥

ಸುರಸಂಸೇವ್ಯೆ ಕಲಾವಿಶಾರದ ಸಭಾಶೋಭಾರ್ಥ [illegible] ।
ನಿರುತಂ ಪೂಜಿತೆ ನೀಲಕಂಠಗಮನೇ ವಿದ್ಯಾ ಕಲಾ [illegible] ॥
ಕರವೀಣಾಧರೆ ನೀರಜಾಸನವಧೂ ಶ್ರೀ ಶಾರದಾ ಮಾತೆಯೇ ।
ಧರೆಯೊಳ್ಬುದ್ಧಿವಿಹೀನನಿರ್ಪೆ ಸತತಂ [illegible] ॥ ೨೦ ॥

ಜಡಸಂಘ ದ್ವೇಷಿಣಿಯಂ ।
ಪೊಡವಿಪರಾಸ್ಥಾನಭೂಷಕವಿಪೂಜಿತೆಯಂ ॥
ಜಡಜಾತಜಾತನಿನೆಯಂ ।
ಪೊಡಮಡುವೆಂ ಶಾರದೆಯನು ಭಕ್ತಿಯ ಭರದಿಂ ॥ ೨೧ ॥

ಕ್ಷಿತಿಯೊಳ್ ಸಜ್ಜನವೃಂದಕೆ ।
ಸತತಂ ಸುಜ್ಞಾನವಿತ್ತು ಪಾಲಿಸುತಿಹಳಂ ॥
ಹಿತನಂ ವರಿಸಿದಳಂ ಸರ ।
ಸತಿಯಂ ಕಾಲ್ವಿಡಿದು ಭಜಿಪೆ ನಾ ಮುದದಿಂದಂ ॥ ೨೨ ॥

ಜಡಜಜನಿನೆಯಾದಡೆಯಂ ।
ಜಡರಿಗೆ ಸುಜ್ಞಾನವೀವ ವಾಗ್ದೇವತೆಯ ॥
ನ್ನೊಡಲೊಳಗಿದ್ದನವರತಂ ।
ನುಡಿಸಲಿ ಕಾವ್ಯವನು ಲೋಕ ಮೆಚ್ಚುವ ತೆರದೊಳ್ ॥ ೨೩ ॥



# ದೇವತೆಗಳು, ಕವಿಗಳು.

---

**ಚಂಪಕ ||**

ಸರಸಿಜಸಂಭವಂ ವರುಣ ಶಂಕರ ವಿಷ್ಣು ಕುಬೇರ ಪಾವಕರ್।
ಗಿರಿಗಳು ಸಾಗರಂ ಗ್ರಹಸಮೂಹವು ವಾಯುವು ನಾಗ ಚಂದಿರರ್ ||
ತರಣಿಯು ಭೂಮಿ ತಾರೆಗಳು ತಾಪಸರಿಂದ್ರರು ಸ್ವಶ್ವಿಕಿತ್ಸಕರ್ ।
ದ್ವಿರದಮುಖಂ ಸದಾ ನಮಗೆ ಸೌಖ್ಯವ ಪಾಲಿಸಲೆಂದು ಬೇಡುವೆಂ || ೨೯

**ಉತ್ಪಲ ||**

ರನ್ನನಕೇಶಿ ರಾಜನ ಷಡಕ್ಷರಿಯಂ ವರಕಾಲಿ ದಾಸನಂ ।
ಪೊನ್ನನ ಮುಳ್ಳಬಾಗಿಲ ನೃಸಿಂಹನ ರುದ್ರನ ವಿಷ್ಣುಶರ್ಮನಂ ||
ಸನ್ನುತ ಪಂಪನಂ ಕನಕದಾಸನ ಜನ್ನನ ನಾಗವರ್ಮನಂ ।
ಮುನ್ನಿನ ಕಾವ್ಯಮಂ ಬರೆದ ಸುಜ್ಞರನೆಲ್ಲರ ವಂದಿಸುತ್ತಿಹೆಂ || ೨೫ ||

ಬನ್ನಗಳೊಡೆಯನ ಗಣಪನ ।
ಮುನ್ನಿನ ಕವಿಗಳನು ನಮಿಸಿ ಬೊಮ್ಮನ ಸತಿಯಂ ||
ಕನ್ನಡ ಭಾಷಾ ದೇವಿಯ ।
ಸನ್ನುತ ಪದಸೇವೆಯಂ ಕೈಕೊಳ್ಳುವೆ ನಾಂ || ೨೬ ||

ನಮಿಪೆನು ಭಕುತಿಯ ಭಾವದೆ ।
ಕುಮಾರ ಪಿತನನ ಗಜಾರ್ತಿಹಾರಿಯುನೀಗಳ್ ||
ವಿಮಲ ಸುಬುದ್ಧಿಯನೀಯೆಂ ।
ದು ಮಾರರಮಣನಂ ಗವೀಶಪತ್ರನಂ ಮುದದಿಂದಂ || ೨೭

ಸುರನದಿ ಶಿರದಿಂ ಕಾಲಿಂ ।
ಹೊರಟಿಹ ವಿಷವನ್ನು ದೇಹದೊಳ್ ಕುತ್ತಿಗೆಯೊಳ್ ।
ಧರಿಸಿಹ ಮದನನ ಪಿತನ ।
ನ್ನರಿಯಂ ಹರಿಹರರ ನಾನು ಭಜಿಪೆಂ ಮುದದಿಂ ॥ ೨೮ ॥

ವರವಿಷ್ಣುವರ್ಧನೋದ್ಭವ ।
ನರಕೇಸರಿ ತನುಜನಾದ ನಾರಾಯಣನಿಂ ॥
ದೊರಿದೀ ಗ್ರಂಥಂ ಧರೆಯೊಳ್ ।
ಮೆರೆಯಲಿ ಶ್ರೀಪಾಂಡುರಂಗನನುನಯದಿಂದಂ ॥ ೨೯ ॥



# ಚಂದ್ರಹಾಸ

[ ಮಲ್ಲಿಗೆ ದುಂಡು ಮಲ್ಲಿಗೆ—ಧಾಟಿಯಂತೆ ]

**ಲಕ್ಷ್ಮೀಶಕವಿಯು ಹೇಳಿದ ಚಂದ್ರಹಾಸ ಚರಿತ್ರದ ಆಧಾರದಿಂದ**

ಭಾರತ ದೇಶದೊಳ್ಳಿರುವುದು ಕೇರಳ ।
ಮೇಧಾವಿ ಯೆಂಬವ ನರಪಾಲನು । ಅವನು-
ಪ್ರಜೆಗಳ ದಯೆಯಿಂದ ಸಲಹುವನು । ದಾನ-
ಧರ್ಮಗಳ ದ್ವಿಜರಿಗೆ ಮಾಡುವನು ।
ಸದ್ಗುಣಿ ಸನ್ಮಾರ್ಗದರ್ಶಕನಾಗಿಹ ।
ಬಡವರ ಕಷ್ಟವ ಕೇಳನು ಕಿವಿಯಿಂ ॥ ಮಲ್ಲಿಗೆ ದುಂಡು ಮಲ್ಲಿಗೆ ॥ ೧ ॥

ಪಟ್ಟದ ರಾಣಿಯ ಉದರದಿ ಹುಟ್ಟಿದ ।
ಎಡಗಾಲಿಗರುವೆರಲ ಬಾಲಕನು । ಬೇಗ-
ಕರಕೊಂಡು ಬಂದರು ಜೋಯ್ಸರನು । ಅವರು-
ನೋಡಿದರು ಹುಟ್ಟಿದ ವೇಳೆಯನು ।
ಮೂಲ ನಕ್ಷತ್ರದ ಕಾರಣದಿಂದೆ ।
ತಂದೆ ತಾಯ್ಗಳಿಗೀಗ ಕೇಡೆಂದು ಪೇಳ್ದರ್ ॥ ೨ ॥

ಪನ್ನೆರಡನೆ ದಿನ ರಾಜಕುಮಾರಂಗೆ ।
ಮಂಗಳಸ್ನಾನವ ಮಾಡಿಸಿ । ಹಾಸಿ-
ರನ್ನದೊಟ್ಟಿಲದಲ್ಲಿ ಮಲಗಿಸಿ । ಚಂದ್ರ-
ಹಾಸನೆಂಬ್ಹೆಸರಿಂದೆ ಲಾಲಿಸಿ ।
ಸಕಲ ಸಂಭ್ರಮದಿಂದೆ ಪ್ರಮದೆಯರೆಲ್ಲ ।
ಜೋಗುಳ ಪದವನ್ನೆ ಪಾಡುತ ನಡೆದರ್ ॥ ೩ ॥

ಚಂದ್ರನ ತೆರದೊಳು ಬಾಲನು ಬೆಳೆಯಲು ।
ರಾಜಧಾನಿಯನರಿಗಳು ಮುತ್ತಿದರು । ನಗರ
ರಕ್ಷಕರಿಲ್ಲದೆ ಕಾದಿದರು । ಶಕ್ತಿ-
ಕುಂದಲು ವೈರಿಗಳ್ ಸೇರಿದರು ।
ಅರಸನು ಕಾದುತ ಕಣದಲಿ ಮಡಿದ ।
ರಾಣಿಯು ಕಷ್ಟವ ಕೇಳುವರುಂಟೇ ॥ ೪ ॥

ರಾಜನ ಮರಣದ ವಾರ್ತೆಯ ಕೇಳುತ ।
ರಾಣಿಯು ದುಃಖಾಗ್ನಿಯಲಿ ಬೆಂದು । ತನ್ನ-
ಜೀವನದಿಂದೇನು ಫಲವೆಂದು । ಅಲ್ಲಿ-
ಕಾಂತನ ಮೃತದೇಹವನೆ ತಂದು ।
ಚಿತೆಯೊಳು ಪ್ರಾಣವ ಬಿಟ್ಟಳು ಸಾಧ್ವಿಯು ।
ಮುದ್ದು ಕುವರನು ಪರದೇಶಿಯಾದ ॥ ೫ ॥

ರಾಜನು ರಾಣಿಯು ಸ್ವರ್ಗವನೇರಲು ।
ಬಾಲನು ಪರದೇಶಿಯಾಗಲು । ಓರ್ವ-
ದಾಸಿಯು ಶಿಶುವನ್ನು ಒಯ್ಯಲು । ತನ್ನ-
ಮಂದಿರದಲಿ ಜೋಕೆ ಮಾಡಲು ।
ರಾಜವಿಲಾಸದೊಳಿರುತಿಹ ಬಾಲಗೆ ।
ಬಡವರ ಮನೆಯೊಳು ಬಳೆಯ ಬೇಕಾಯ್ತು ॥ ೬ ॥

ಪಾಲ್ಬೆಣ್ಣೆಯಿಲ್ಲದೆ ಜೋಪಾನ ಮಾಡಲು ।
ಪರರನ್ನು ದಾದಿಯು ಬೇಡುವಳು । ತಂದು-
ಎಣ್ಣೆಯ ಕೂಸಿಗೆ ಪೂಸುವಳು । ದಾಸಿ-
ಮಲಗಿಸಿ ತೊಟ್ಟಿಲ ತೂಗುವಳು ।
ಅಳುತಿಹ ಕಂದನ ಲಾಲಿಸುತಿಹಳು ।
ಬಡವರ ಮನೆಯೊಳು ಬಳೆಯಬೇಕಾಯ್ತು ॥ ೭ ॥

ಬಡತನದಿಂದಲಿ ದಾಸಿಯ ಮನೆಯೊಳು |
ರಾಜಕುಮಾರನು ಬಳೆಯಲು | ಬೇನೆ-
ಬಂದವಳು ಹಾಸಿಗೆ ಹಿಡಿಯಲು | ಕಾಲ-
ದೂತರು ಬೇಗನೆ ಒಯ್ಯಲು |
ಅರಸನ ಕುವರನು ತಬ್ಬಲಿಯಾಗಿ |
ಬೀದಿಯೊಳಾಡುತ ತಿರುಗಾಡುತಿರ್ದ ॥ ೮ ॥

ನೋಡಿದ ತರುಣಿಯರೆಲ್ಲರು ಮುತ್ತಿಕ್ಕಿ |
ಮನೆಯೊಳು ಕರಕೊಂಡು ಪೋಗುವರು | ಕಲ್ಲು-
ಸಕ್ಕರೆ ಖರ್ಜೂರ ನೀಡುವರು | ತಮ್ಮ-
ಮಕ್ಕಳ ಸಂಗಡ ಎರೆಯುವರು |
ಸವಿಸವಿ ಊಟವನುಣಿಸುತ ಮುದ್ದಾಡಿ |
ಹಾಸಿಗೆಯೊಳು ತಾವು ಮಲಗಿಸಿಕೊಳ್ವರ್ ॥ ೯

ದುಂಡಾದ ಸಾಲಿಗ್ರಾಮವು ಬೀದಿಯೊ |
ಳಿರುವದ ಕಂಡನು ಬಾಲಕನು | ಗೋಲಿ-
ಗುಂಡೆನುತಾಟವನಾಡುವನು | ಹುಡುಗ-
ರೆಲ್ಲರ ಗೆಲ್ಲುತಲಿರುವನು |
ರಾತ್ರಿಯು ಆಗಲು ಬಾಯೊಳಗಿರಿಸುತ |
ಸುಖದಿಂದ ನಿದ್ರೆಯ ಮಾಡುತಲಿರ್ದ ॥ ೧೦ ॥

ಬೀದಿಯೊಳಾಡುತಲಿರುವಂಥ ಬಾಲಗೆ |
ಹೂವಾಡಿಗರು ಮಾಲೆ ಹಾಕುವರು | ಕೆಲರು-
ಕಸ್ತೂರಿತಿಲಕವನಿಡುತಿಹರು | ಹಣ್ಣು-
ಹಂಪಲಗಳನೆ ನೀಡುವರು |
ಬೀದಿಯ ಕೂಸಾಗಿ ಬಳೆಯುತಲಿರ್ದ |
ದಿಕ್ಕಿಲ್ಲದವರನ್ನು ದೇವನೆ ಪೊರೆವ ॥ ೧೧ ॥

ದುಷ್ಟಬುದ್ಧಿಯೆಂಬ ಮಂತ್ರಿಯ ಸದನದಿ ।
ಭೂಸುರರೆಲ್ಲರು ಕೂಡಿರಲು । ರಾಜ-
ಚಿಹ್ನದ ಬಾಲನ ನೋಡಲು । ಮುಂದೆ-
ರಾಜನಾಗುವನೆಂದು ಹೇಳಲು ।
ಮತ್ಸರದಿಂ ಸಚಿವ ಬಾಲನ ಕೊಲ್ಲಲು
ಹಂಚಿಕೆಯನು ತಾನು ಹಾಕ ಹತ್ತಿದ ॥ ೧೩ ॥

ಆಳನ್ನು ಗುಟ್ಟಾಗಿ ಕರೆಯಿಸಿ ಮಂತ್ರಿಯು ।
ಕರಕೊಂಡು ಬನ್ನಿರಿ ಬೇಡರನು । ನೀವು-
ಮಾಡಿರಿ ಬಾಲನ ಕೊಲೆಯನ್ನು । ನಿಮಗೆ-
ಕೊಡುವೆನು ದ್ರವ್ಯದ ರಾಶಿಯನು ।
ವಿಪಿನದೆ ಕರಕೊಂಡು ಹೋದರು ಬಾಲನ ।
ಹಣವು ಎಂದರೆ ಬಾಯಿತೆರೆಯುವ ಹೆಣದೋಲ್ ॥ ೧೪ ॥

ಮುದ್ದಾದ ಬಾಲನ್ನ ನೋಡಲು ಬೇಡರು ।
ಕೊಂದರೆ ನಮಗೇನು ಬರುವದು । ಕಾಲ್ಗೆ-
ಬೆರಳೊಂದು ಹೆಚ್ಚಿಗೆ ಇರುವದು । ಅದನು-
ಗುರ್ತಿಗೆ ಕೊಯ್ಕೊಂಡು ಹೋಗುವುದು ।
ದ್ರವ್ಯದ ರಾಶಿಯನದರಿಂದ ಪಡೆವುದು ।
ಭಕ್ತರ ದೇವತೆ ಪ್ರೇರೆಯುತಿರಲ್ತೇ ॥ ೧೫ ॥

ತುರಗವನೇರಿದ ಬೇಡ ಕುಳಿಂದನು ।
ಬೇಟೆಯನಾಡಲು ಹೋದನು । ನೋಡ-
ರೋದಿಸುತಿರುವಂಥ ಮಗುವನ್ನು । ರಕ್ತ-
ಸುರಿಯುತಲಿರುವಂಥ ಕಾಲನ್ನು ।
ಬಡವನು ದ್ರವ್ಯದ ಖಣಿಯು ಸಿಕ್ಕಂತೆ ।
ಬಾಲನ ಕರಕೊಂಡು ಮನೆಗೆ ಶೀಘ್ರ ಬಂದ ॥ ೧೬ ॥

ಬೇಡನ ರಾಣಿ ಮೇಧಾವಿನಿ ನೋಡಲು |
ಮನದೊಳು ತಾಳುತೆ ತೋಷವನು | ನೆನೆದು-
ಹಿರಿಯರ ಪೂರ್ವದ ಪುಣ್ಯವನು | ಫಲಸಿ-
ನಾ ಕಂಡೆನು ಸುಖವನ್ನು |
ಹಿಂಗಿತು ನನ್ನಯ ಬಂಜೆತನವೆಂದು |
ಬಗಲೊಳು ಕರಕೊಂಡು ಮುದ್ದಾಡುತಿಹಳು || ೧೬ ||

ಪ್ರಾಯಕೆ ಬಂದಿಹ ತನ್ನಯ ಮಗನನ್ನು |
ಕಪ್ಪುಗಾಣಿಕೆ ಕೊಟ್ಟು ಕಳುಹಿದ | ದುಷ್ಟ-
ಬುದ್ಧಿಯ ಮುಂದೆ ಇಳುಹಿದ | ಬಹಳ-
ಅಚ್ಚರಿಯಿಂದಲಿ ಕೇಳಿದ |
ಬೇಡನು ತಾನೇಕೆ ಬರಲಿಲ್ಲವೆಂದು |
ಪ್ರಶ್ನಿಯ ಮಾಡಿದ ಚಂದ್ರಹಾಸಂಗೆ || ೧೭ ||

ನಮ್ಮಯ ಜನಕನು ಕಳುಹಿದ |
ಈ ಸಾರಿ ನೀ ಹೋಗಿ ಬಾ ಎಂದ | ಮಗನು-
ಬಂದೆಯೋ ನೀನು ಎಲ್ಲಿಂದ | ವನದಿ-
ಸಿಕ್ಕೆನು ತಮ್ಮಯ ದಯೆಯಿಂದ |
ಪೂರ್ವದ ಕೃತ್ಯವ ಮನದಲಿ ನೆನೆಯುತ |
ಹೊರಗೆ ಸಂತೋಷವ ತೋರಿದ ಮಂತ್ರಿ || ೧೮ ||

ನಿನ್ನನ್ನು ನೋಡಲು ಸಂತೋಷವಾಯಿತು |
ನಮ್ಮ ರಾಜಧಾನಿಗೆ ನೀನು ಹೋಗಿ | ನನ್ನ-
ಮಗನಿಗೆ ನೀ ಭೆಟ್ಟಿಯಾಗಿ | ಪತ್ರ-
ಕೊಡುವುದು ಗುಪ್ತವಾಗಿ |
ಪತ್ರವ ತಕ್ಕೊಂಡು ಮಂತ್ರಿಗೆ ವಂದಿಸಿ |
ನಡೆದನು ನೆನೆವುತ ನರಸಿಂಹನನ್ನು || ೧೯ ||

ನಗರದ ಹೊರಭಾಗದಲ್ಲಿರ್ದ ವನದೊಳು ।
ದಾರಿಯ ಶ್ರಮದಿಂದೆ ಒರಗಲು । ಸಚಿವ-
ನಾತ್ಮಜೆ ವಿಷಯೆಯು ಬಂದಳು । ರೂಪ-
ನೋಡಿ ತಾ ವಿಸ್ಮಿತಳಾದಳು ।
ಮನ್ಮಥರೂಪನೋ ಗಂಧರ್ವಪುತ್ರನೋ ।
ಆರಿಹರೆನ್ನುತ್ತ ಆದಳು ಮುಗ್ಧಳು ॥ ೨೦ ॥

ಈತನ ಕೈ ಹಿಡಿದರೆನ್ನಯ ಜನ್ಮವು ।
ಸಾರ್ಥಕವಾಗುವದೆನುತ । ಕಟ್ಟಿ-
ಕೊಂಡಿದ್ದ ಗಂಟನು ಬಿಚ್ಚುತ । ಪತ್ರ-
ತಂದೆಯದೆಂಪದನು ನೋಡುತ ।
ಕಾರ್ಯವ ಗೆಯ್ಯುವದು ವಿಷವ ಮೋಹಿಸುವಂತೆ ।
ಜನಕನು ಬರೆದಿರ್ದ ಲೇಖನವ ನೋಡಿ ॥ ೨೧ ॥

ತಪ್ಪಿಹ ತಾತನು ವಿಷಯೆ ಎಂಬುವದನ್ನು ।
ವಿಷವೆಂದು ತಾನಲ್ಲಿ ಬರೆದಿಹನು । ತಿದ್ದಿ-
ಕಾಡಿಗೆಯಿಂದಾ ಪತ್ರವನು । ಇಟ್ಟು-
ಹೋದಳು ಬಿಟ್ಟಾತ್ರಾಣವನು ।
ಆಗುಹೋಗುಗಳನ್ನು ತಪ್ಪಿಸಲಿಕ್ಕೆ ।
ಮನುಜನ ಕೈಯೊಳಗಿರುತಿಹುದೇನೈ ॥ ೨೨ ॥

ಎಚ್ಚರವಾಗಲು ಕುದುರೆಯ ಹತ್ತಿದ ।
ರಾಜಧಾನಿಯ ಬಂದು ಸೇರಲು । ಮಂತ್ರಿ-
ಸುತನಿಗೆ ಪತ್ರವ ನೀಡಲು । ತಿದ್ದಿ-
ದಕ್ಷರ ತಿಳಿಯದೆ ಓದಲು ।
ಮರುದಿನ ಪ್ರೀತಿಯ ತಂಗಿಗೆ ಲಗ್ನ ।
ಬಹಳ ಸಂಭ್ರಮದಿಂದೆ ಜರುಗಿಸಿಬಿಟ್ಟ ॥ ೨೩ ॥

ಪಯಣವ ಮುಗಿಸಿದ ತಂದೆಯು ಬಂದಿರೆ ।
ಸಂಭ್ರಮವೇನೆಂದು ಕೇಳಲು । ತನ್ನ-
ಬರೆಹವನವನಿಗೆ ತೋರಲು । ತಿದ್ದಿ-
ದಕ್ಷರ ತಿಳಿಯದಾಗಲು ।
ಹೊರಗೆ ಸಂತಸವನ್ನು ತೋರುತ ಮನದಲಿ ।
ಅಳಿಯನ ಕೊಲ್ಲುವ ಯುಕ್ತಿಯೊಳಿದ್ದ ॥ ೨೪ ॥

ಲಗ್ನದ ಕಾರ್ಯವು ತೀರಿದ ಮೇಲಣ ।
ದಂಪತಿಗಳು ಶಕ್ತಿಗುಡಿಗೆ । ಬಹಳ-
ಸಂಭ್ರಮದಿಂದಲಿ ಪೂಜೆಗೆ । ಹೋಗ-
ಬೇಕೆಂದ ಕೂಡಿದ ಜನರಿಗೆ ।
ಮಂತ್ರಿಯು ಪೇಳ್ದನು ಪೂರ್ವದ ನಡತೆ ।
ನಮ್ಮಯ ವಂಶದೊಳಿರುತಿಹುದೆಂದ ॥ ೨೫ ॥

ಬೇಡರ ಕರೆಯಿಸಿ ಮಂತ್ರಿಯು ಪೇಳ್ದನು ।
ಪೂಜೆಗೆ ಬಂದಿಹರನ್ನು । ಕಡಿದು-
ಹಾಕಿರಿ ನೀವವರನ್ನು । ನಿಮಗೆ-
ಕೊಡುವೆನು ಸಾವಿರ ಹೊನ್ನು ।
ಗುಟ್ಟಿನ ಮಾತಿನು ತಪ್ಪಿಸಬೇಡಿರಿ ।
ಕಠಿಣ ಶಿಕ್ಷೆಯನ್ನು ಮಾಡುವೆನೆಂದ ॥ ೨೬ ॥

ಕುಂತಳ ರಾಜನಿಗವಸಾನ ಬಂದಿರೆ ।
ಮದನನ ಕರೆಯಿಸಿ ಪೇಳ್ದನು । ಚಂದ್ರ-
ಹಾಸನಿಗೀವುದು ರಾಜ್ಯವನು । ಲಗ್ನ-
ಮಾಳ್ಪುದು ನನ್ನಯ ಮಗಳನ್ನು ।
ತೀವ್ರದಿಂದಲಿ ನೀನು ಕರಕೊಂಡು ಬಾ ಎಂದು ।
ಕಣ್ಣೀರ ಸುರಿಸುತ ಬಹಳ ದುಃಖದಿಂ ॥ ೨೭ ॥

ನಗರದ ಹೊರಗಿಹ ದೇವಿಯು ದರ್ಶನಕೆ ।
ಹೋಗಿ ಬಾ ಎಂದೆನಗೆ ಹೇಳಿಹನು । ಮಾವ-
ನಪ್ಪಣೆಯ ಮೀರಲಾರೆನು । ಕ್ಷಮಿಸ-
ಬೇಕೆಂದು ನಿನ್ನನ್ನು ಬೇಡುವೆನು ।
ಕಾಲಿಯ ದೇಗುಲಕೆ ಹೋಗುವೆ ನಾನು ।
ನರಪನ ನೀನೀಗ ಕಾಣ್ಬುದು ಎಂದ ॥ ೨೮

ಗುಡಿಯೊಳು ಕಾಲಿಡಲಡಗಿದ ನೀಚರು ।
ಮದನನ ಶಿರವನ್ನು ಕಡಿದರು । ನೋಡ-
ಬಂದವರು ಗಾಬರಿಯಾದರು । ಮಂತ್ರಿ-
ಗೀಸುದ್ದಿಯನ್ನು ಪೇಳ್ದರು ।
ಸುದ್ದಿಯ ಕೇಳಲು ಸಿಡಿಲಿನ ಘಾತದೆ ।
ಒಣಮರ ಬೀಳುವ ತೆರದೊಳು ಬಿದ್ದ ॥ ೨೯ ॥

ಮಂತ್ರಿಯು ಭೂಮಿಯಿಂದೇಳುತ್ತ ರೋದಿಸಿ ।
ದೇವಿಯ ಗುಡಿಯಲಿ ಬಂದನು । ಮಗನ-
ಶವವನ್ನು ಕಣ್ಣಿಂದ ಕಂಡನು । ತನ್ನ-
ಜನ್ಮವಿನ್ನೇತಕೆ ಎಂದನು ।
ಕಂಬಕ್ಕೆ ಹಾಯಲು ಕುಂಬಳಕಾಯೋಲ್ ।
ತಲೆಯೊಡೆದು ಪ್ರಾಣವ ನೀಗಿದ ಮಂತ್ರಿ ॥ ೩೦ ॥

ಅರಮನೆ ಕೆಲಸವು ತೀರಿದ ಮೇಲಣ ।
ಗುಡಿಗೆ ಬಂದನು ಚಂದ್ರಹಾಸನು । ಪುತ್ರ-
ನೊಡನೆ ಸತ್ತಂಥ ಮಾವನನ । ದುಃಖ-
ದಿಂದಲಿ ಸುರಿಸಿ ಕಣ್ಣೀರನ್ನು ।
ಶಿರವನ್ನು ತುಂಡರಿಸಿ ದೇವಿಗೆ ನೀಡುವೆ ।
ಬೊಂಕದೊಳಿರುತಿಹ ಕತ್ತಿಯ ಹಿರಿದ ॥ ೩೧ ॥

ಭಕ್ತನ ಧೈರ್ಯವ ನೋಡಲು ದೇವಿಯು ।
ಪ್ರತ್ಯಕ್ಷವಾಗಿ ಕೈ ತಡೆದಳು । ವರವ-
ಕೇಳಿಕೊಳ್ಳೆಂದು ಹೇಳಲು । ಮಂತ್ರಿ-
ಬದುಕಲಿ ಮಗನೊಡನೆ ಎನ್ನಲು ।
ದೇವಿಕಟಾಕ್ಷವ ಬೀರಲು ಎದ್ದು ।
ಕುಳಿತರು ನರಸಿಂಹ ನಡಿಯು ಧ್ಯಾನಿಸುತ ॥ ೩೨ ॥



# ನೃಪ



ವಾರಿಜಸಖನು ದಶಾಶಾ ।
ಪೂರಕನಾಗಿಹ ಸಹಸ್ರಕರಗಳ ಬಲದಿಂ ॥
ಭೂರಮಣ ಸಹಸ್ರಾಶಾ ।
ಪೂರಕನಾಗಿರುವ ನೊಂದೆ ಕರ ಬಲದಿಂದಂ ॥ ೧ ॥

ಅರಿಗಳತಿ ಗರ್ವದಿಂದಂ ।
ಕರದಲಿ ಪಿಡಿದಿರ್ದ ಶಸ್ತ್ರವುಂ ಕವಿದೈನ್ಯಂ ॥
ಧರಣೀಪಾಲಕ ನಿನ್ನಯ ।
ದರುಶನದಿಂ ಗಲಿಸುತಿರ್ಪುವಂಜಿಕೆಯಿಂದಂ ॥ ೨ ॥

ಉರಗೇಶನಂತೆ ಭೂಪಂ ।
ಧರಣಿಯ ಬಹು ಭಾರವನ್ನು ಪೊತ್ತಿರ್ದಡೆಯುಂ ॥
ಧರಿಸಿಲ್ಲಂ ವಿಷಮುಂ ಚಂ ।
ದಿರವೆಸರಿರಲೇಂ ಕಲಂಕಮಂ ತಳೆದಿಲ್ಲಂ ॥ ೩ ॥

ಅಹಿಪನ ಶೌರ್ಯಂ ಕೂರ್ಮನ ।
ಬಹುವೀರ್ಯಂ ಕೂಡಿ ರೂಪಮಂ ಪಡೆದಿಹವೋಲ್ ॥
ಮಹಿಯತಿಭಾರವ ಭುಜದೊಳು ।
ವಹಿಸಿದ ನೃಪನಿನ್ನೊಳಿಹುದು ಶೌರ್ಯಂ ವೀರ್ಯಂ ॥ ೪ ॥

ಚಂಪಕ

ಮನದೊಳು ವಾರಿಜೋದ್ಭವೆಯು ವಕ್ತ್ರಸರೋರುಹದಲ್ಲಿ ಕೇಶವಂ ।
ಘನಸುಖವೀವ ಭಾರತಿಯು ಕಂಠದೆ ಮೌಲಿಯೊಳಬ್ಜ ಸಂಭವಂ ॥
ವಿನುತಮಹೀಧರೋದ್ಭರೋದ್ಭವೆ ಕರಾಗ್ರದೆ ಬಾಹುಗಳಲ್ಲಿ ಶಂಕರಂ ।
ಜನಪನ ದೇಹದಲ್ಲಿ ನೆಲೆಸಿರ್ದುದರಿಂ ಸಲೆಮನ್ನಿಸುತ್ತಿಹರ್ ॥ ೫ ॥

ಮಾರಮಣಂ ಶಿವಬೊಮ್ಮಂ ।
ಕ್ಷೀರಾಬ್ಧಿಯು ಮೇರುಗಿರಿಯ ಹಂಸವ ತಿಳಿಯಲ್ ॥
ವಿೂರಿದ ಸಂಶಯ ಪುಟ್ಟಲ್ ।
ಭೂರಮಣನ ಕೀರ್ತಿ ಪರ್ಬೆ ವಿಶ್ವಂಭರೆಯೋಳ್ ॥ ೬ ॥

ಹರಿಪೊಯ್ದು ದಧಿಯ ಶರಧಿಗೆ ।
ಗಿರಿಶಂ ನಿಟಿಲಾಕ್ಷದಿಂದೆ ದಹಿಸುತೆ ಗಿರಿಯಂ ॥
ಶರಜೋದ್ಭವ ಜಲದುಗ್ಧವ ।
ನರಸಂಚೆಗೆ ತೋರಿಸುತ್ತೆ ಶೋಧಿಸುತಿರ್ಪರ್ ॥ ೭ ॥

ಮತ್ತೇಭ ॥

ಸಿರಿಯೊಳ್ಮಾಧವನನ್ನು ಸೋಲಿಸುತಿರಲ್ ಗಾಂಭೀರ್ಯದೊಳ್ವಾರ್ಧಿಯಂ ।
ಜರೆಯಲ್ ತೇಜದೊಳಂಬುಜಾತಸಖನಂ ಷಡ್ವಕ್ತ್ರನಂ ಶೌರ್ಯದೊಳ್ ॥
ತಿರೆಯೊಳ್ಮೆರುವ ನೇಳಿಸಲ್ ಕಳೆಗಳೊಳ್ ಕಂಜಾತಸಂಜಾತನಂ ।
ನಿರುತಂ ನಾಚಿಸೆ ರೂಪದೊಳ್ಮದನನಂ ಭೂವಿೂಶ್ವರಂ ಶೋಭಿಪಂ ॥ ೮ ।

ನರಪನೆ ತವ ಸತಿ ಭೂವಧು ।
ನಿರುತದಲಿ ಭುಜಂಗಭೋಗದಲ್ಲಿರ್ದಡೆಯುಂ ॥
ಗರುವಿಕೆಯಿಂ ಜನಪದದೊಳ್ ।
ಮೆರೆವುದು ಜಗದೊಳ್ ವಿಚಿತ್ರಮಾಗಿಹುದಲ್ತೇ ॥ ೯ ॥

ನಿರುತಂ ತನ್ನಯ ಪ್ರಜರಂ।
ಕರುಣೆಯೊಳೋವುತ್ತೆ ತನ್ನ ಮಕ್ಕಳ ತೆರದೊಳ್ ॥
ವರಮಂತ್ರಿವಿಚಾರವನನು ।
ಸರಿಸುತೆ ನಡೆವಂಗೆ ನೃಪನಿಗೆ ಮಾನವು ಧರೆಯೊಳ್ ॥ ೧೦ ॥

ಹರುಷದೆ ತನ್ನ ಸುಖಂಗಳ ।
ಪರಿತ್ಯಜಿಸಿ ಲೋಕಹಿತವ ಗೆಯ್ಯುತಲಿರ್ಪಾ ॥
ನರಪಾಲನಾತ ಶ್ರೇಷ್ಠಂ ।
ಧರಣಿಜೆಯಂ ಬಿಟ್ಟ ರಾಮ ಜನಹಿತದೆಶೆಯಿಂ ॥ ೧೧ ॥

ಗುರು ತಿಳಿಯದಿರ್ದ ಸುದ್ದಿಂಯ ।
ನೆರೆಯದ ವಸ್ತುವನು ಕಲ್ಪಭೂಸಂಜಾತಂ ॥
ಧರಣೀಪಾಲಂ ತನ್ನ ।
ಲ್ಲಿರುತಿಹ ಬಹು ಶಕ್ತಿಯಿಂದೆ ತಿಳಿವಂ ಕೊಡುವಂ ॥ ೧೨ ॥

ನಿನ್ನಯ ಗುಣವರ್ಣನೆಯಂ ।
ಸನ್ನುತ ಫಣಿಪತಿಯು ಮಾಡ ಗಣಪಂ ಬರೆಯಂ ॥
ಕುನ್ನಿಯ ತೆರದೊಳಗಿಹನ ।
ಮ್ಮನ್ನರಪಾಡೇನು ನೃಪನ ವರ್ಣಿಸೆ ಬರೆಯಲ್ ॥ ೧೩ ॥



# ಸಮುದ್ರ

ಚಂಪಕ ॥

ಸಿರಿಯನು ಶಂಖವನ್ನು ವರಕೌಸ್ತುಭವನ್ನು ರಮೇಶಗಿತ್ತೆ ಚಂ ।
ದಿರನನು ನೀಲಕಂಠನಿಗೆ ನಿರ್ಜರನಾಥಗೆ ಶುಭ್ರದಂತಿಯಂ ॥
ನ್ನುರುತರ ಕೋಪದಿಂ ಘಟಜನೆನ್ನನು ಪೀರಲು ಬಂದವೇಳೆಯೊಳ್ ।
ಮೊರೆಯಿಡೆ ಕೇಳ್ದರೇ ಹರಿಹರೇಂದ್ರರು ಶ್ರೀಗತನನ್ನು ಕೇಳ್ವರಾರ್ ॥ ೧ ॥

ವಿಷಧರಸಂಕುಲದಿಂದಂ ।
ವಿಷಧರತಲ್ಪದಲಿ ಮಲಗಿಕೊಂಡಿಹ ಹರಿಯಿಂ ॥
ವಿಷದಿಂ ಕೂಡಿರ್ದೊಡಲಿಂ ।
ವಿಷಗಳು ಮೂರಿರೆ ವಿಷಾದವಬ್ಧಿಯು ಪಡುವಂ ॥ ೨ ॥

ಕೆಲವರು ದೂಡುತ್ತಿರ್ಪರ್ ।
ಕೆಲಬರ್ ತಾಡನವಗೆಯ್ಯುತಿರ್ಪರ್ ಸತತಂ ॥
ಕೆಲಬರು ಸಿರಿಯನ್ನೊಯ್ವರ್ ।
ಜಲಧಿಯ ಬಹು ಕಷ್ಟವನ್ನು ಕೇಳುವರುಂಟೇ ॥ ೩ ॥

ಪವನೋಲ್ಲಸಿತ ತರಂಗಾ ।
ರ್ಣವನೇ ನೀನಗೇಕೆ ಗರ್ವ ನೀರಡಿಸಿದವಂ ॥
ತವತಟದೆ ಬಂದು ಕೂಪಕೆ ।
ಜವದಿಂ ಮರಳುತ್ತಲಿಹುದು ಲಾಂಛನಮಲ್ತೇ ॥ ೪ ॥

ಶರಧಿ ಹರಗೀಯೆ ನಂಜ ।
ಸ್ಮರೆ ಸಿಟ್ಟಿಂ ಕುಡಿಯೆ ನಿನ್ನ ನೀರಡಿಸಿದವಂ ॥
ಭರದಿಂಮುಗುಳುತೆ ಪೋಗು ।
ತ್ತಿರಲೆಂಬೀಶಾಪವನ್ನು ಕೊಟ್ಟಂ ಗಿರಿಶಂ ॥ ೫ ॥

**ಚಂಪಕ ॥**

ಶಿಲೆಗಳು ರತ್ನಗಳ್ ಸಿರಿ ಜಲಾಂಗನೆ ತೀರದೆ ಕಲ್ಪಭೂರುಹಂ ।
ಜಲವಮೃತಂ ಪ್ರವಾಳಲತೆ ಶೈವಲ ಸ್ವರ್ಣವು ಗುಪ್ತಶೈಲಗಳ್ ॥
ಮಳಲದು ಮೌಕ್ತಿಕೌಘವಿನಿತ್ತೈಸಿರಿಯಿರ್ದಡದೇನು ಸಾಗರಂ ।
ಬಲು ತೃಷೆಯಿಂದೆ ಮಾನಿಸನು ಬಂದಿರೆ ತುಷ್ಟಿಯನೀಂಬಲಾಪನೆ ॥ ೬ ॥

ಧರಣಿಯ ತೆರದಲಿ ವನಸಿರಿ ।
ಯಿರುವದು ವನದಂತೆ ಹರಿನಿವಾಸದ ತಾಣಂ ॥
ಹರಿಯಂತೆ ಶಂಖಚಕ್ರವ ।
ಧರಿಸಿಹೆನೆಂದಬ್ಧಿಯುರ್ಬಿ ಘೋಷಿಸುತಿರ್ಕುಂ ॥ ೭ ॥

ಹರಿಗಿತ್ತೆ ನಿನ್ನ ಸಿರಿಯಂ ।
ಹರನಿಗೆ ಸುತನಾದ ರೋಹಿಣೀಧವವಿಧುವಂ ॥
ಸುರಪಂಗೆ ಕಲ್ಪಭೂಜವ ।
ಶರಧಿಯೆ ನಿನ್ನನ್ನರೊಳರೆ ದಾತರು ಜಗದೊಳ್ ॥ ೮ ॥

ಭಾರತದ ಪುರಾಣದ ವೋಲ್ ।
ತಾರಾನಾಯಕನ ತೆರದಿ ಸೀಗೋಲಿನವೋಲ್ ॥
ವಾರಾಶಿಯು ಪ್ರತಿ ಪರ್ವದೆ ।
ಮೀರುವ ರಸದಿಂದೆ ಸತತ ಶೋಭಿಸುತಿರ್ಕುಂ ॥ ೯ ॥



# ಬೇಟೆ



**ಚಂಪಕ ॥**

ಕರಿಗಳ ಕುಂಭದಿಂದೊರಟ ಮುತ್ತಿನಹಾರದೆ ಕಂಠ ಶೋಭಿಸಲ್
ಧರಣಿಗೆ ವೃಷ್ಟಿಯಂ ಕೊಡುವ ಮೇಘದವರ್ಣದ ದೇಹವೊಪ್ಪಲು ॥
ಶರವೆ ಧನುಷ್ಯದಿಂ ಕರಮದೊಪ್ಪಿರೆ ಕಸ್ತುರಿ ಬೊಟ್ಟಿನಿಂ ನೊಸಲ್ ।
ಕರವಸೆಯುತ್ತಿರಲ್ ಶಬರರೆಲ್ಲರುಬಂದರು ಕಾನನಾಂತದೊಳ್ ॥ ೧ ॥

**ಉತ್ಪಲ ॥**

ಕೊಬ್ಬಿದಕಂಠ ಕೊಂಕುಗುರು ಸೂಲದಪಲ್ಗಳು ಸಣ್ಣಜಂಘೆಗಳ್ ।
ಉಬ್ಬಿದ ವಕ್ಷವೇರ್ದಗೆದ ಹೊಟ್ಟೆಯು ರಾಜಿಸುತಿರ್ಪ ನಾಯ್ಗಳಿಂ ॥
ಡಬ್ಬರದಿಂದೆ ಪೋಗುತಿಹ ಬೇಡರು ಕಾನನದಲ್ಲಿ ಸಿಂಹಮಂ ।
ಹೆಬ್ಬುಲಿಯನ್ನು ಕೊಲ್ಲುವೆವು ಎನ್ನುತೆ ಪರ್ಬಿದರಲ್ಲಿ ಲುಬ್ಧಕರ್ ॥ ೨ ॥

**ಚಂಪಕ ॥**

ಇದು ಮದವೇರಿದಾನೆಯು ಕಲಂಕಿದ ಪೂಗೊಳವಿಲ್ಲಿ ನೋಳ್ಪುದಿಂ ।
ತಿದುಹರಿ ಪುಲ್ಲೆಯನ್ನುಗಿದ ಬಿದ್ದಿಹ ರಕ್ತಪಿದಿಂತು ಸೂಕರಂ ॥
ಕೆದರಿದ ಭೂಮಿಯಿಂತಿದೆ ನವಿಲ್ಗಳು ತುಂಡಿಸಿ ಕೊಂದ ಸರ್ಪವಿಂ ।
ತಿದು ಹುಲಿಯಿರ್ಪ ಬಳ್ಳೆಯಿದೆನ್ನುತೆಬೇಡರು ಶೋಧಿಸುತ್ತಿಹರ್ ॥ ೩ ॥

**ಚಂಪಕ ॥**

ದ್ವಿರದಕೆ ನೀಳ್ದಹಸ್ತವನು ಸಿಂಹಕೆ ನಾಲಿಗೆಯನ್ನು ಕೋಡುಗಳ್ ।
ಇರುವ ಮೃಗಕ್ಕೆ ವಾದಶರದಿರ್ಪರಲಂ ಪುಲಿಗಿಂತು ಬೇಂಟೆಯೋಳ್ ॥
ಕರಗಳನೆತ್ತಿ ಭೂಮಿಯನುಕೋಡುವ ಹಂದಿಗೆ ಕೈಯ ಮುಷ್ಟಿಯ ।
ಶರಭಕೆ ನಾಲ್ಕೆರಲ್ಗಳ ಕಿರಾತರು ಸನ್ನೆಗಳನ್ನು ತೋರಿದರ್ ॥ ೪ ॥

**ಮತ್ತೇಭ ||**

ನಡೆನೀಮುಂದಿಲ್ಲಿ ಬಾಣಾವಳಿಯನು ಸುರಿಸೈ ಬೊಬ್ಬೆಯಂಕೊಟ್ಟು ನಿಲ್ಲೈ
ಜಡಿ ಕೋಲಿಂ ಮುಂದೆ ವ್ಯಾಘ್ರಂ ಬರುವುದು ಕೆಲಸಾರ್
ಜಾಲಮಂಬೀಸುಹೋಗೈ ||
ಅಡಿಯಂ ನೋಡುತ್ತೆಸಾರೈ ಪೊದರಿನೊಳಡಗೈ ವೃಕ್ಷವನ್ನೇರು ಎಂಬೀ ।
ನುಡಿಗಳ್ಪರ್ಬಲ್ ಕಿರಾತರ್ ವನದೆ ಪಶುಗಳಂ ಬಾಣದಿಂ
ಕೊಲ್ಲುತಿರ್ಪರ್ || ೫ ।

ಹರಿಣವು ಪುಲ್ಲೆಯು ಹಂದಿಯು ।
ಶರಭವು ಸೈರಿಭವು ಸಿಂಹ ಗಂಡಕ ಗಜಗಳ್ ||
ನೆರೆದಿರ್ದ ಪಶುಗಳತ್ತಾ ।
ತುರದಿಂದೋಡಿದವು ಬೇಡರಬ್ಬರರವದಿಂ || ೬ ||

ಹರಿಣವ ಲುಬ್ಧಕ ನೋಡಲ್ ।
ಕರದಿಂ ಮೃಗವನ್ನು ತೋರಿ ನಾಯಿಯ ಬಿಡಲಾ ||
ತುರದಿಂದೆ ಸಾರಿ ನಾಯಿಯು ।
ಸರಳಿಪ ಪುಲ್ಲೆಯನು ಹಿಡಿದು ಕೊಂದಿತು ವನದೊಳ್ || ೭ ||

**ಚಂಪಕ ||**

ಮದಕರಿ ಕುಂಭವನ್ನಗಿವ ಸಿಂಹವ ಬಾಲಕಿರಾತ ನೀಕ್ಷಿಸಲ್ |
ಮುದವನೆತಾಳ್ದು ಬತ್ತಳಿಕೆಯಿಂ ಶರಮಂ ತೆಗೆದಿಟ್ಟು ಬಿಲ್ಲಿನೊಳ್ ||
ಸದೆಯಲು ಬಾಣವಾಕ್ಷಣದೆ ದಂತಿಯ ಮೇಲಿರುತಿರ್ಪ ಸಿಂಹದಾ |
ಎದೆಯೊಳು ಪೋಗಿ ನಾಂಟಲರಿ ಕಷ್ಟವ ಪೊಂದುತೆ ಬಿದ್ದು ಸತ್ತಿತು || ೮ ||

**ಉತ್ಪಲ ||**

ಕೋರೆಯ ದಾಡೆಯಂ ಮಸೆದು ಭೂಮಿಯ ನುಗ್ಗಡದಿಂದೆ ತೋಡುತ |
ದಾರಿಯಲಿರ್ಪ ವೃಕ್ಷಗಳ ನುಗ್ಗುತ ಬೀಸುತೆಮೊಂಡಬಾಲಮಂ ||
ಬೇರುಗಳನ್ನು ಕಂದಗಳ ಕೀಳುತೆ ಸೈರಿಭದಂತೆ ಭೀಕರಾ |
ಕಾರದ ಸೂಕರಂ ಬರಲು ನೋಡಿದನಾರ್ವನು ವೀರ ಲುಬ್ಧಕಂ || ೯ ||

ಕಿಟಿಯಂನೋಡಲು ಕೋಪದೆ |
ಕಟಿಯುತೆ ದಂತಗಳಕ್ಕೈಯ ಮುಷ್ಟಿಯ ತೋರ್ದಂ ||
ಭಟನಾದ ಬೇಡ ಹಂದಿಯ |
ನಿಟಿಲದೆ ಬರ್ಚಿಯನು ಚುಚ್ಚಿ ಬದಿಯಲಿ ನಿಂತಂ || ೧೦ ||

ತೋರಿದ ಸನ್ನೆಯ ನೋಡದೆ |
ಸಾರುವ ಬೇಡಂಗೆ ಹಂದಿ ಸಿಟ್ಟಿಂ ಹೊಡೆಯಲ್ ||
ಕೂರಸಿಯಂ ಪೋಲುತ್ತಿಹ |
ಕೋರೆಯ ಘಾತಕ್ಕೆ ಬಿದ್ದಸಲ್ಲಿಯ ವನದೋಳ್ || ೧೧ ||

**ಚಂಪಕ** ||

ವನದೊಳು ಪರ್ಬಿಕೊಂಡಿರುವ ಲುಬ್ಧಕರೆಲ್ಲರು ದುಷ್ಟಕೃತ್ಯದಿಂ |
ಮನಸಿಗೆಬಂದ ಪಕ್ಷಿ-ಮೃಗಜಂತುಗಳಂ ಸಲೆಕೊಲ್ಲುತಿರ್ಪುದಂ ||
ವನಜಸಖಂ ನಿರೀಕ್ಷಿಸದೆ ಬೀಳ್ವೆನು ಪಶ್ಚಿಮ ವಾರ್ಧಿಮಧ್ಯದೋಳ್ |
ಎನುತೆ ಮುಳುಂಗಿದಂಸುಜನರೀಕ್ಷಿಸೆ ಸಾಧ್ಯವೆ ಪಾಪಕೃತ್ಯಮಂ || ೧೨ ||



# ಬೇಸಿಗೆ

ವಾ. ಷ. ||

ಬೇಸಿಗೆಯ ಕಾಲದಲಿ ತಾಪವನು ಸಹಿಸದಲೆ ।
ಶೇಸನಿಂ ಲಕ್ಷ್ಮಿಯಿಂ ಸಹಿತಾಗಿ ವಾರ್ಧಿಯೊಳ್ ।
ವಾಸಿಸಿದನಾಹರಿಯುಃ ಲೋಕಸಂಹಾರಕಂ ಪರಶಿವಂ ತನ್ನ:ಜಡೆಯೊಳ್ ॥
ಲೇಸಾಗಿ ಧರಿಸಿಹಂ ಚಂದ್ರನಂ ಗಂಗೆಯಂ ।
ಸಾಸಿರದಳೇಕ್ಷಣನ ನಾಭಿಕಮಲದೆ ಬೊಮ್ಮ ।
ಗಾಸಿಯಾಗದಲಿರ್ದ ಭೂಲೋಕದೊಳಗೆನಿತು
ತಾಪವ್ರೋಕಮಲಾಪ್ತನಿಂ ॥ ೧ ॥

ವಾ. ಷ. ||

ಕೆಲಜನರು ಮೃಣ್ಮಯದ ಪಾತ್ರೆಯಿಂ ತಂಪಾದ ।
ಮಿಲಿತಕರ್ಪುರಜಲವ ಕುಡಿಯುವರ್ ಕೇಸರಂ ।
ಸಲೆಮಿಶ್ರಿತಾರಕ್ತ ಚಂದನದ ಕರ್ದಮವ ಮೈಗೆಲ್ಲ ಪೂಸಿಕೊಳ್ವರ್ ॥
ಮೆಲುತಿಹರ್ ಗುಣಯುಕ್ತ ತಾಂಬೂಲವಮಂ ಕೆಲರ್ ।
ಮಲಯಮಾರುತನೀಗ ಸೊಂಪುಬೀರುವನೆಂದು ।
ಜಲಜಾಪ್ತ ಮುಳುಗುತಿರಲಿನೆಯರಿಂ ಸಹಿತಾಗಿ
ಕುಳ್ಳಿರ್ದರುಪ್ಪರಿಗೆಯೊಳ್ ॥ ೨ ॥

ವಾ. ಷ. ||

ದಿನಕರನು ತಾನೀಗ ತಾಪಮಂ ಕೊಡುತಿರಲು ।
ಜನರೆಲ್ಲ ಕಷ್ಟಮಂ ಮಾರ್ಗದೊಳ್ ಸಹಿಸುತ್ತೆ ।
ಮನದೊಳಗೆ ತಣ್ಣೆಳಲಿನಾಶ್ರಯವ ಮಾಡಿದೊಡೆ ಬದುಕುತಿಹೆವೆನ್ನುವರ್ಗೆ ॥
ಇನಿದು ಸರಮಂಗೆಯ್ವ ಪಿಕಗಳಿಂ ಸ್ವಾಗತವ ।
ಬಿನದದಿಂ ಮಾಡಿದಡೆ ತಳಿರುಗಳ್‌ಬೇಕೆಂದು ।
ಬನದೊಳಗೆ ಸೊಕ್ಕಿನಿಂ ಬೆಳೆದಿರ್ದ ಮಾಮರಗಳೆಲ್ಲವುಂ ಫಲಿಸಿರ್ದುವು ॥ ೩ ॥

**ವಾ. ಷ.** ||

ದನಗಾಹಿಗಳು ತಮ್ಮ ದನಗಳಿಂ ಸಹಿತಾಗಿ ।
ಮನಬಂದ ತೆರದಿಂದೆ ನೆಳಲೊಳಗೆ ಕುಳಿತಿರ್ದ ।
ರನಿವಾರತಾಪದಿಂ ಬೇಸತ್ತು ದಾರಿಗರ್ ಮೈಯೊಡ್ಡಿ ವಿಶ್ರಮಿಸುವರ್ ॥
ಧ್ವನಿಯಮಾಳ್ಪುದಬಿಟ್ಟು ಪಕ್ಷಿಗಳ್ ಮೌನದಿಂ ।
ಬಿನಡದಿಂ ವೃಕ್ಷವನ್ನಾಶ್ರಯವ ಮಾಡಿದುವು ।
ದಿನಕರನ ತಾಪಮಂ ಕಳೆಯಲೋಸುಗಮೆಂದು ಮಾಮರಂ
ಜನಿಸಿರ್ದುದು ॥ ೪ ॥

**ವಾ. ಷ.** ॥

ದಾರಿಯಂನಡೆಯುತ್ತ ಬೇಸತ್ತು ಮಾನಿಸರ್ |
ನೀರಡಿಸಿ ಕಳವಳಿಸಿ ಕಂಗೆಟ್ಟು ಬಾಯಾರಿ |
ಸೇರಿದರು ಸಹಕಾರ ಶೀತಲಚ್ಛಾಯೆಯೊಳಗಿರುತಿರ್ಪ ನೀರ್ದಾಣಮಂ ||
ಬಾರಿಬಾರಿಗೆ ಕುಡಿದು ತಣ್ಣೀರನೆಲ್ಲರುಂ |
ಘೋರತರಬಿಸಿಲಿಂದೆ ಕಷ್ಟಬಡುತಿಹೆವೆಂದು |
ವಾರಿಜಾಪ್ತಗೆ ಮಿತ್ರನೆಂಬೀಹೆಸರು ಸಾರ್ಥಕಮಿದಾಗ ಬಹುದೇ || ೫ ||

ಊರಿಗೆಪೋಗುವ ಪಥಿಕರ್ |
ದಾರಿಯ ನಡೆಯುವುದರಿಂದೆ ತೃಷೆಯುತಿಯಾಗಲ್ ||
ನೀರೀಗನಮಗೆ ಸಿಕ್ಕರೆ |
ಸೇರುವೆವ್ವೆ ಶೀಘ್ರದಿಂದೆ ಪುರವನ್ನೆಂದರ್ || ೬ ||

ಕರಿಗಡಬುಗಳನು ತಿಂದಿ |
ರ್ದರುವರು ನಡುವಗಲಿನಲ್ಲಿಯೂರಿಗೆ ಪೋಗ ||
ಲ್ಕರೆ ದಾರಿಯನ್ನುನಡೆಯಲ್ |
ದೊರೆಯದೆ ನೀರ್ಗಂಟಲೊಣಗಲೆಲ್ಲರು ಸತ್ತರ್ || ೭ ||

ನಡುವಗಲಿನಲ್ಲಿ ಭಾನುವು ।
ಕಡುತಾಪವನೀಯುತಿರ್ಪನದರಿಂ ಮನುಜರ್ ॥
ಸುಡುತಿರ್ಪ ನೆಲದೆಕಾಲ ।
ನ್ನಿಡಲಾರೆವು ನಾವೆನುತ್ತೆ ಬಳಲುತ್ತಿರ್ದರ್ ॥ ೮ ॥

ಬಿಸಿಲೊಳು ದಾರಿಯ ನಡೆವರ್ ।
ಬಸವಳಿದಾ ನರರೊಳೊರ್ವ ಸುಡುವವು ಕಾಲಿಂ ॥
ದುಸುರ್ಗರೆದೆನೆ ಮತ್ತೊರ್ವಂ ।
ಪಸುಳನೆ ಕಾಲುಗಳ ನಿರದಲಿಟ್ಟುಕೊ ಎಂದಂ ॥ ೯ ॥

**ಮತ್ತೇಭ ॥**

ಕೊಡೆಯಿಂದಾತಪತಾಪಮಂ ಕಳೆಯುವರ್ ಮಾರ್ಗಂಗಳೊಳ್
ಪೋಗುವರ್ ।
ಕುಡಿವರ್ ನೀರನು ತೃಷ್ಣೆಯಿಂ ಬಳಲುವರ್ ನೀರ್ದಾಣದೊಳ್ ಮಾನಿಸರ್ ॥
ಪಡುವರ್ ತಣ್ಣೆಳಲನ್ನು ಸಾರಿ ಕೆಲಬರ್ ವಿಶ್ರಾಂತಿಯಂ ಪೊಂದುವರ್ ।
ಕೊಡುವಂ ಬೇಸಿಗೆಯಲ್ಲಿ ತಾಪವನದಾ ತೇಜೋಗ್ರಹಾಧೀಶ್ವರ ॥ ೧೦ ॥

ಗರಿಗೆದರಿನಿಂತ ನವಿಲೊಳು ।
ಸರಸರ ಪೋಗಲ್ಕೆ ಯುರಗಶಿರಮಣಿ ಯಿಂದಂ ॥
ಉರಿವವು ನವಿಲಿನ ಗರಿಗಳ್ ।
ಹರಡಿದ ಬೇಸಗೆಯ ತಾಪವೆಂತುಟೊ ಕಾಡೊಳ್ ॥ ೧೧ ॥

**ಚಂಪಕ ॥**

ಭುಜಗವುತಾಪದಿಂ ವನದೆ ಕೇಕಿಯ ಛಾಯೆಯೊಳಿರ್ಪುದೈಸದಾ ।
ಗಜಗಳಛಾಯೆಯಾಶ್ರಯವ ಹೊಂದಿತು ಸಿಂಹಕದಂಬಕಾಡಿನೊಳ್ ॥
ನಿಜಚರಣಂಗಳನ್ನಿಡದೆ ಪುಲ್ಲೆಯು ಹೊಂದಿತು ಸಿಂಹದಾಶ್ರಯಂ ।
ನಿಜಮಿಹವೈರಮಂ ಬಿಡುತಲಿರ್ಪವು ಪ್ರಾಣಿಗಳರ್ಕ ತಾಪದಿಂ ॥ ೧೨ ॥

ಕರಿಕುಂಭದಲ್ಲಿ ಶೋಭಿಪ |
ವರಮುಕ್ತಾಫಲಗಳುದುರೆ ಸಿಡಿದುದು ದಂತಂ ||
ಉರಗದನೆತ್ತಿಯು ಬಿರಿಯಲ್ |
ಶಿರಮಣಿ ಹಾರಿತ್ತು ವನದೆ ಪಸರಿಸೆ ತಾಪಂ || ೧೩ ||

ಹರಿಣಪ್ರ ತೃಷ್ಣೆಯು ಪ್ಪೊಂದ |
ಲ್ಕುರುತರಬಿಸಿಲೊಳ್ ಮರೀಚಿಕಾ ಜಲಕಮಲಾ ||
ಕರಮೆಂದುತಿಳಿದು ಮುಂದಕೆ |
ತುರಿಪದಿ ಪೋಪೋಗೆ ಬೀಳ್ದುದಲ್ಲಿಯೆ ವನದೊಳ್ || ೧೪ ||

ಸಲಿಲರುಹಾಕರಂ ಬಣಗಲಾಗಸರನ್ನನತೀವ ತಾಪದಿಂ |
ಸುಲಲಿತ ನೀರಜಾಳಿ ಬಲು ನೊಂದಳಲುತ್ತಿರೆ ತಮ್ಮಕಷ್ಟಮಂ ||
ತೊಲಗಿಸುವೆಂದು ಮಿತ್ರನಿಗೆ ಪೇಳಲು ಭಾಸ್ಕರ ತನ್ನ ಶೌರ್ಯದಿಂ |
ಜಲಕಿರಣಾಳಿಯಿಂ ಪಿಳಿವ ಪ್ಪೋಲಿಸೆದತ್ತು ಮರೀಚಿಕಾಜಲಂ || ೧೫ ||

ಖರಕರತಾಪಮಂ ಕೊಡಲು ಭೂಲಲನಾಮಣಿ ವಾರಿತೃಷ್ಣೆಯಿಂ |
ಧರೆಯೊಳಗಿರ್ಪ ವಾರಿಯನು ಪೀರ್ದಡೆ ನೀರಿನ ತೃಷ್ಣೆ ಪೋಗದೆ ||
ಕೆರೆಯೊಳಗಿರ್ಪ ನೀರಿನ ತರಂಗಗಳಂತೆಸೆವಾತಪಾತ್ರಮಂ |
ಪರುಷದೆ ಪೀರೆ ಬಾಯ್ಬಿಡುವ ಪ್ಪೋಲಿಸೆಯುತ್ತಿಹವಲ್ಲಿ ಬೀಡೆಗಳ್ || ೧೬ ||

ಕರಿಕುಂಭ ಮೌಕ್ತಿಕಂಗಳು |
ಸುರಿಯಲು ನಡುನೆತ್ತಿ ಬಿರಿಯೆ ನೀರ್ವನಿಯಿಂದಾ ||
ತುರದಿಂದೆ ಕೇಕಿ ಸಂಗ |
ಲ್ಕುರಿ ಸುಡೆ ನಿಜಚುಂಚು ನವಿಲು ಮಿಡುಕಿತು ವನದೊಳ್ || ೧೭ ||



# ಮಳೆಗಾಲ

—୦୦ଓ৩୦୦—

**ವಾ. ಷ.** ||

ಉರಗೇಂದ್ರ ಶ್ರಮವನ್ನು ವಹಿಸುತ್ತೆ ಪೆಡೆಯಲ್ಲಿ |
ಧರಿಸಿಕೊಂಡಿರುವಿಳೆಯನ್ನು ಸುತ್ತಿಕೊಂ |
ಡಿರುವಂಥ ಶರನಿಧಿಗಳೆಲ್ಲವುಂ ಕಮಲಸಖನತ್ಯುಷ್ಣ ಕಿರಣಂಗಳಿಂದ ||
ಉರಿಬೆಂದು ತಲ್ಲಣಿಸಿ ಗಗನವನ್ನಡರಿದವೊ |
ಚರಿಸುತಿಹ ಘೋಟಕಸಮೂಹವ್ರೋ ಎಂಬಂತೆ |
ಮೆರೆಯುತಿಹವಲ್ಲಲ್ಲಿ ವಾರಿಧರಪಂಕ್ತಿಗಳು ತರತರದವರ್ಣದಿಂದೆ || ೧ |

ವಾರಿಧರಂಗಳು ನಿಲ್ಲದೆ |
ನೀರಧಿಯಂ ಮತ್ತೆ ಕೂಡೆಬಯಸಿದ ತೆರದೊಳ್ ||
ಧಾರುಣಿಯೊಳು ಮಳೆರಾಯಂ |
ಸಾರಿದ ಕೋಲ್ಮಿಂಚು ಗುಡುಗುಗಳ ಬಲದಿಂದಂ || ೨ ||

ದಾರಿಯು ಕೆಸರಾಗಿರುತಿರೆ |
ಜಾರುತೆ ಬಿದ್ದೆದ್ದು ನೋಳ್ಪ ಮೂರ್ಖನತೆರದೊಳ್ ||
ಸೋರುತ್ತಿರ್ಪವು ಮನೆಗಳ್ |
ಮೀರಿದ ಕಷ್ಟಕ್ಕೆ ಮುಂದೆ ಸೌಖ್ಯವೆ ಸಿದ್ಧಂ || ೩ ||

ನಿಲ್ಲಲು ಮೆಲ್ಸರಿಯಾಣೇ |
ಕಲ್ಲುಗಳು ಸುರಿಯೆ ಪಟಪಟ ಸರ್ವಾಂಗಣದೊಳ್ ||
ಮಲ್ಲಿಗೆಪೂಗಳ ಹರಿಯುತೆ |
ಚೆಲ್ಲಿಹರೇಕೆಂಬ ಭಾಸವಾಗುತ್ತಿರ್ಕುಂ || ೪ ||

ನೀರನ್ನೀಂಟದೆ ಚಾತಕ ।
ಧಾರುಣಿಯಲಿ ತಪವಗೆಯ್ಯೆ ಸ್ವಃಪತಿ ದಯೆಯಿಂ ॥
ತೋರುತೆ ಮಳೆಯನ್ನಿತ್ತಂ ।
ಮಾರಮಣನನೊಲಿಸದವನು ಖಗದಿಂದಂ ಕೀಳ್ ॥ ೫ ॥

**ಉತ್ಪಲ** ॥

ಗೂಡೊಳಗಿರ್ದ ಹಕ್ಕಿ ಮಳೆಯೊಳ್ ಧರಣೀರುಹದಗ್ರದಲ್ಲಿಹ ।
ಕೋಡಗವನ್ನು ನೋಡಿ ಬಲಯುಕ್ತಿಯುತಂ ಮನೆ ಕಟ್ಟಿಕೊಳ್ಳಲು ॥
ಕಾಡೊಳು ಬಾರದೇ ನಿನಗೆ ಬೇನೆಯೆ ಎನ್ನಲು ಸಿಟ್ಟಿನಿಂದೆ ಬೀ ।
ಸಾಡಿತು ತತ್ ಖಗಾಲಯವ ದುಷ್ಟಗೆ ಪೇಳುವುದಾತ್ಮನಾಶವು
ನಾಂಶಕಾರಣಂ ॥ ೬ ॥



# ಚಳಿಗಾಲ



**ವಾ. ಷ.** ||

ಹರನು ಚಳಿಬಾಧೆಯಿಂ ಶಿರದೊಳಗೆಧರಿಸಿರ್ದ ।
ವರಮುಪಾವನೆಯಾದ ಗಂಗೆಯಂ ಪಿತನಾದ ।
ಶರನಿಧಿಯ ಮನೆಗೆ ನೀ ಪೋಗೆಂದು ಕಳುಹಿ ಕುಮುದಾಪ್ತನಂ
ನಭದೊಳಿರಿಸಿ ॥
ಮರಗೂಳನಂ ನಿಟಿಲನೇತ್ರದಲಿ ಧರಿಸುತ್ತೆ ।
ದ್ವಿರದಾಜಿನವ ತಂದು ಪೊದೆಯುತಿರ್ಮುಡಿಕೆಯಿಂ ।
ಗಿರಿರಾಜಸಂಭವಾಲಿಂಗನದ ಸುಖವನ್ನು ಬಿಟ್ಟು ಸಂಚರಿಸಲಾರಂ ॥ ೧ ॥

**ವಾ. ಷ.** ||

ಧರೆಯೊಳಗೆ ನಿರ್ಭಯದೆ ದುಷ್ಕಾರ್ಯಮಂ ಮಾಡಿ ।
ನರಕಯಾತನೆಗಂಜಿ ಸಂಕಟದೆ ಬಳಲುತ್ತೆ ।
ಧರಧರನೆ ನಡುಗುತಿಹ ದುಷ್ಕರ್ಮಿಗಳ ತೆರದೆ ಲೋಕದೊಳಗೆಲ್ಲೆಡೆಯೊಳು ॥
ಹರಡಿಕೊಂಡಿಹ ಚಳಿಯ ಬಾಧೆಗಂಜುತೆ ಜನರು ।
ನಿರುತದಲಿ ನಡುಗುತ್ತೆ ಹಿಮರಾಜನೆನಿತುನಿ ।
ಷ್ಕರುಣನೋ ಎಂದೆನುತೆ ಹಿಮನೃಪನ ಸೋಲಿಸಲ್ ತರಣಿಯಂ
ಭಜಿಸುತಿಹರು ॥ ೨ ॥

**ವಾ. ಷ.** ||

ಭರದಿಂದೆ ಪ್ರಜ್ವಲಿಪ ಬೆಂಕಿಯಲ್ಲೊಣಗಿರುವ ।
ಕೊರಡುಗಳ ಹಾಕಲಾಕ್ಷಣದೊಳಗೆ ಬೆಂಕಿಯಾ ।
ಗುರುತರದಶಕ್ತಿಯದು ಕಡಿಮೆಯಾಗುವ ತೆರದಿ ಹೇಮಂತಋತುವಿನೊಳಗೆ ॥
ಪರಿಪರಿಯ ಪಕ್ವಾನ್ನಗಳನುಂಡು ಸಿರಿಯುತರು ।
ಹರುಷದಿಂ ಕುಳಿತಡೆಯು ಹಿಮಶಕ್ತಿ ಕುಂದದಿರೆ ।
ಸರಸದಿಂ ಗುಣಯುಕ್ತತಾಂಬೂಲಮಂ ಸೇವಿಸುತ್ತಿಹರು ಮತ್ತೆಮತ್ತೆ ॥ ೩ ॥

**ವಾ. ಷ.** ||

ಕುಗ್ಗಿರಲು ತಾರುಣ್ಯ ವೃದ್ಧಾಪ್ಯವಡರಿಸಿರ ।
ಲಗ್ಗಿಯಂ ಬಹುಕಷ್ಟದಿಂ ಹೊತ್ತಿಸುತೆ ಮೇಲೆ ।
ವೇಗ್ಗೊರ್ಗರಡುಗಳ ಹಾಕಿ ಮಾಡಿದರೊಲೆಗಳಾಶ್ರಯವನ್ನೆ ವೃದ್ಧಜನರು ॥
ಮುಗ್ಗಲೊಳಗಿಹ ರಮಣಿಯಾಲಿಂಗನದಸುಖಕೆ ।
ಸಗ್ಗದೊಳಗಿನಸುಖಂ ಸರಿಬಾರದೆನ್ನುತ್ತೆ ।
ಹಿಗ್ಗುವರು ತರುಣರೊಲೆಗಿಂತ **ನೊಲೆಗಳಾಶ್ರಯವೆ** ಲೇಸಂಬರಿದು
ಸಹಜಮಲ್ಲೇ ॥ ೪ ॥

**ವಾ. ಷ.** ||

ಬಾಲಕನು ಪಾಸುಗೆಯೊಳೊರಗಿರಲು ।
ವೇಳೆಯಾಗಿಹುದೀಗ ಭಾಸ್ಕರನು ಮೂಡಿಹನು ।
ಶಾಲೆಯನು ಸಾರಿನಲು ಪೋಗಲಾರೆನು ಜನನಿ ನೊರೆವಾಲನೀವೆ ನಿನಗೆ ॥
ಲೀಲೆಯಿಂ ಕುಡಿಬೇಗ ಚಳಿಯು ಪೋಗುವದೆನಲು ।
ನಾಲಿಗೆಗೆ ರುಚಿಯನಿಸುವಲಕ್ಕಿಯಂ ತಿಂದು ।
ಮೇಲೆ ಬಿಸಿನೀರನ್ನು ಕುಡಿವು ಪೋಗುವೆನೆಂದು ಹಟಮಾಡುತಿಹನು ॥ ೫ ॥



# ಧನ



ಧನಹೀನನಾದ ಮನುಜನ ।
ತನುಜರು ಹೆಂಡತಿಯು ಗೆಳೆಯರೆಲ್ಲರು ಬಿಡುವರ್ ॥
ಘನಸಿರಿಯ ಮತ್ತೆ ಪಡೆಯಲ್ ।
ಮನೆಯಲಿ ಬರುತಿಹರು ಧನವೆ ಮನುಜಂಗಾಪ್ತಂ ॥ ೧ ॥

ಧನಯುತನಾಗಿರ್ದವನಂ ।
ಘನಪಂಡಿತಬಂಧುಮಿತ್ರ ಬಾಂಧವರೆಲ್ಲರ್ ॥
ವಿನಯದೆ ಸೇವಿಸುವರು ಪ್ರತಿ ।
ದಿನದಲಿಯದರಿಂದೆ ಧನವನಾರ್ಜಿಸು ಮನುಜಾ ॥ ೨ ॥

ಧನವಿಹ ನರನೆ ಕುಲೀನಂ ।
ಘನತರಪಂಡಿತನೆಯಾತ ಗುಣಸಂಪನ್ನಂ ॥
ಜನರವಗೆಮಾನವೀವರು ।
ಧನವಿರ್ದವನಲ್ಲಿ ಬರುವವೆಲ್ಲ ಗುಣಂಗಳ್ ॥ ೩ ॥

ಧನಕಿರ್ಪವು ತ್ರಿಗತಿಗ ।
ಳನುಭೋಗ ದಾನನಾಶವೆಂಬವುಜಗದೊಳ್ ॥
ಮನುಜನು ದಾನವ ಮಾಡದೆ ।
ಯನುಭೋಗಿಸದಿರ್ದ ಧನಕೆ ತ್ರಯಗತಿಯಕ್ಕುಂ ॥ ೪ ॥

ತರುವಂ ಪಕ್ಕಿಗಳೆಲ್ಲವು ।
ಶರನಿಧಿಯಂ ನದಿಗಳೆಲ್ಲ ಸೇರುವ ತೆರದೊಳ್ ॥
ಧರೆಯೊಳು ಧನವಿರುತಿರ್ಪಾ ।
ನರನಂ ಸೇರುತ್ತಲಿಹವು ಸಕಲಗುಣಂಗಳ್ ॥ ೫ ॥

ಮನೆ ತನುಸಂಭವದಿರಿಂದಂ ।
ತನುಜಾತರು ವಿದ್ಯೆಯಿಂದೆ ವಿದ್ಯೆ ವಿನಯದಿಂ ॥
ವಿನಯವು ಧನದಿಂ ಸೌಖ್ಯವು ।
ಧನದಿಂ ದೊರೆಯುವದು ಧನವನಾರ್ಜಿಸು ಮನುಜಾ ॥ ೬ ॥



# ದಾರಿದ್ರ್ಯ

**ಚಂಪಕ ॥**

ಹುತವಹನಿಷ್ಟಮುಂ ಬಗೆದು ಪಾರ್ಥನು ಖಾಂಡವವನ್ನುಸುಟ್ಟ ಮಾ- ।
ರುತಿಯು ಸುವರ್ಣಲಂಕೆಯನು ಕಾರಣವಿಲ್ಲದೆ ದಗ್ಧಮಾಡಿದಂ ॥
ರತಿಪತಿಸುಂದರಾಂಗನನು ಶಂಕರ ಸುಟ್ಟನು ಕೋಪದಿಂ ದರಿ ।
ದ್ರತೆಯನು ಸುಟ್ಟು ಲೋಕಹಿತಗೆಯ್ದ ಮಹಾತ್ಮರ ಕಾಣೆ
ಧಾತ್ರಿಯೊಳ್ ॥ ೧

ವನಮುಂ ಭರದಿಂ ಸುಡುತಿರ ।
ಲನಿಲಗೆ ಸಖನಾಗಿ ಬರುತಲಿರ್ಪಂ ಪವನಂ ॥
ಮನೆಯೊಳು ದೀಪವನಾರಿಪ ।
ಮನುಜಗೆ ದಾರಿದ್ರ್ಯವಿರಲು ಮೈತ್ರಿಯ ಬಯಸರ್ ॥ ೨ ॥

**ಚಂಪಕ ॥**

ತರಣಿಯು ದುಸ್ತರಾಂಬುಧಿಯ ದಾಂಟಿಮದೇಭವನೇರಲಂಕುಶಂ ।
ಸುರನದಿಯಲ್ಲಿ ಮಜ್ಜನವು ಮಾಡಿದ ಪಾಪವ ನೀಗಲಿಕ್ಕೆ ಭೂ- ॥
ಪರ ಬಹುಸೇವೆಯಾರ್ಜಿಸಲು ವಿತ್ತವ ಕತ್ತಲೆ ಜಾರಿ ದೀಪವು ।
ಶರರುಹಜಂಗಸಾಧ್ಯವು ದರಿದ್ರರ ಕಷ್ಟವ ನಾಶಮಾಡಲು ॥ ೩ ॥

ಘೋರಾರಣ್ಯದೆ ವಾರಣ ।
ವೈರಿಯ ಕೆಣಕುವುದು ಲೇಸು ಹಾಲಾಹಲಮುಂ ॥
ಪೀರುವುದು ಲೇಸು ಧರೆಯೊಳು ।
ದಾರಿದ್ರ್ಯದ ತಾಪವನ್ನು ತಾಳ್ವುದು ಕಷ್ಟಂ ॥ ೪ ॥

ಪರಗೇಹವಾಸದಿಂದಂ ।
ನಿರುತದಿದೇಶಪ್ರವಾಸದಿಂದಂ ನೀಚಾ ॥
ತ್ಮರ ಸೇವೆಯಿಂದೆ ಕಷ್ಟಂ ।
ಪಿರಿದಾಗಿರುವುದು ದರಿದ್ರಮನುಜನ ಕಷ್ಟಂ ॥ ೫ ॥

ಚೋರನಿಗೆಲ್ಲಿಯಧರ್ಮಂ ।
ವಾರಾಂಗನೆಯರಿಗೆ ನೇಹವೆನ್ನುವದಿಲ್ಲಂ ॥
ಭೂರಮಣಗೆಲ್ಲಿ ತುಷ್ಟಿಯು ।
ದರಿದ್ರನಾದವಗೆ ಶಾಂತಿಯನ್ನುವದಿಲ್ಲ ॥ ೬ ॥



# ಸಾಲ



ಮನುಜನು ಸಾಲವ ಮಾಡಲ್ ।
ನತರಕಷ್ಟವನು ಹೊಂದುತಿರ್ಪಂ ಜಗದೊಳ್ ॥
ಮನದೊಳುದುಭವಿಪಚಿಂತಾ ।
ಜನಿತಾಗ್ನಿಯ ತಾಪದಿಂದೆ ಬೇಯುತ್ತಿರ್ಪಂ ॥ ೧ ॥

ಸಾಲವೆ ನಿರಯಂ ಘೋರಂ ।
ಸಾಲವೆ ಮನುಜರ್ಗೆ ಪಾರತಂತ್ರ್ಯದ ಮೂಲಂ ॥
ಸಾಲವೆ ಶೀಲಕೆ ಶೂಲಂ ।
ಸಾಲವೆ ಮನುಜರ್ಗೆ ಸಟಿಗೆ ಕಾರಣವಲ್ತೇ ॥ ೨ ॥

ಮದಕರಿಯ ಕೆಣಕ ಬಹುದೈ ।
ಸದನದೊಳಿಡಬಹುದು ತಂದು ಬರಸಿಡಿಲುಗಳಂ ॥
ಹೆದರಿಸಬಹುದೈ ಸಿಂಹವ ।
ತುದಿಯಿಲ್ಲದ ಋಣದಬಾಧೆಯಳಿಯಲುಬಹುದೇ ॥ ೩ ॥

ಗಿರಿಯನ್ನೆತ್ತಿಡಬಹುದೈ ।
ಶರಧಿಯ ಜಲವನ್ನು ಬೇರೆಯಳೆದಿಡಬಹುದೈ ॥
ಕರದೊಳು ತರಣಿಯ ಹಿಡಿಯಲು ।
ಬರುವದು ಋಣಬಾಧೆಯನ್ನು ನೀಗಲು ಬಹುದೇ ॥ ೪ ॥

ನರಪತನೂಸಂಭವನಂ ।
ದ್ವಿರದವನತಿಯಾಗಿ ಬೊಗಳುತಿರ್ಪಂಗನೆಯಂ ॥
ಪರರಂ ವಂಚಿಪ ಸಖನಂ ।
ಖರಮಂ ಸಾಲಿಗನ ನಮಿಸಿ ಬಿಡವುದು ದೂರಿಂ ॥ ೫ ॥



# ಮದ್ಯ (ಪಾನ) ಮಹಿಮೆ !



ಹರಿವೆನು ಮುಗಿಲಂ ಕೈಯಿಂ ।  
ತರುವೆನು ಭಗಣಾಜ್ಜಸೂರ್ಯಬಿಂಬಾದಿಗಳಂ ॥  
ಶರಧಿಯನು ಕುಡಿದು ಬಿಡುವೆಂ ।  
ಸುರೆಯಂ ಕುಡಿದವನು ಬೊಗಳ್ವ ಮೂರ್ಖನ ತೆರದೊಳ್ ॥ ೧ ॥

ವನದೊಳು ತಪಮಂ ಗೆಯ್ಯುತೆ ।  
ತನುವಂ ಸವಿಸುವರದೇಕೊ ದೇವನ ಕಾಣಲ್ ॥  
ಘನರುಚಿಮದ್ಯವ ಸೇವಿಸ ।  
ಲನುನಯದಿಂ ತಾನೆಬರ್ಪನೆಂಬಂ ಕುಡಕಂ ॥ ೨ ॥

ಮದ್ಯವೆ ತಾಯಿಯು ತಂದೆಯು ।  
ಮದ್ಯವೆ ಸನ್ಮಿತ್ರಬಂಧುವರ್ಗವೆ ಮದ್ಯಂ ॥  
ಮದ್ಯವೆ ಶಾಂತಿಯ ಮಾರ್ಗಂ ।  
ಮದ್ಯಕ್ಕೆಣೆಯಾದುದಿಲ್ಲವೆಂಬಂಕುಡಕಂ ॥ ೩ ॥

ಕಲುಕಟ್ಟಿಗೆಯಿಂಮಾಡಿದ ।  
ಚಲುವಾಗಿಹ ಮೂರ್ತಿಯೊಳಗೆ ಇರವನೆ ದೇವಂ ॥  
ಜಲಜಾಪ್ತಾಬ್ಜರೊಳಿಹನೇ ।  
ಬಲುರುಚಿಮದ್ಯದಲಿ ದೇವನಿರ್ಪಂ ಸತತಂ ॥ ೪ ॥

ಕುಡಿಕುಡಿದು ಕುಡಿದು ಸುರೆಯನು ।  
ಎಡವುತೆ ಬೀಳುತ್ತೆ ಬಂದು ಸತಿಯಂ ಸುತರಂ ॥  
ಹೊಡೆವನು ಮನೆಯೊಳಗಿರುತಿಹ ।  
ಒಡವೆಗಳಂ ದಾರಿಯಲ್ಲಿ ಬಿಸುಡುತ್ತಿರ್ಪಂ ॥ ೫ ॥

ಕೋಲು ಮುದುಕಗೆ ಲೇಸು ಹಾಲು ಕೂಸಿಗೆ ಲೇಸು ।
ಸಾಲವನು ತಂದು ಉಣಲೇಸು **ವಿಧುರಂಗೆ** ।
ಸೂಳೆಯೋಲೇಸು ಸರ್ವಜ್ಞ ॥ ೭ ॥

ಸುರಪತಿಯು ಮೋಸದಿಂ ಪರಸತಿಯ ಭೋಗಿಸಲು ।
ವರಮುನಿಯ ಶಾಪದಿಂ ಭಗಗಳಾಗಿಹವು ।
ನಿರುತ ಮೈತುಂಬ ಸರ್ವಜ್ಞ ॥ ೮ ॥



## ಪದ್ಯಗಳ ಭಾವಾನುವಾದ



ನಿಳೆಯದೆ ನಾರೀವೃಂದದೆ ।
ಗಳಹುತೆ ಪೌರುಷದ ಮಾತನಾಡುತಲಿಹನಂ ॥
ದಳಪತಿಯಂ ಮಾಳ್ಪುದು ನೀ ।
ರಿಳಿಯದಗಂಟಲಲಿ ಕಡುಬ ತುರುಕಿದ ತೆರದೊಳ್ ॥ ೧ ॥

ನುಡಿವುದು ದಿಟವಾದುದ ಮೇಣ್ ।
ಕಡುತರಹಿತವಾದುದನ್ನು ನುಡಿವುದು ಸತತಂ ॥
ಕೆಡಕಾಗುತಿರ್ಪ ಸತ್ಯವ ।
ಬಿಡವುದು ಸತ್ಕೀರ್ತಿಯನ್ನು ಪಡೆವುದು ಮನುಜಾ ॥ ೨ ॥

ಧನವಿರುತಿರೆ ಕಷ್ಟಂ ನಿ ।
ರ್ಧನನಾಗಲ್ಕೆ ಕಷ್ಟ ಸುತನಿರೆ ಕಷ್ಟಂ ॥
ತನೂಭವನಿರದಿರೆ ಕಷ್ಟಂ ।
ಮನುಜಗೆ ಜಗವೆಲ್ಲ ಕಷ್ಟಮಯಮಿಹುದಲ್ತೇ ॥ ೩ ॥

ಅತಿದರ್ಪದಿಂದೆ ರಾವಣ ।
ನತಿಶಯಮಾನವನು ಬಯಸೆ ಕುರುಪಂ ಬಲಿಭೂ ॥
ಪತಿಯತಿದಾನದೆಯಳಿದಂ ।
ಸತತಂ ಕೇಡೊದಗುತಿರ್ಪದತಿಶಯದಿಂದಂ ॥ ೪ ॥

ಅರಳಿದಹೇಮದ ಕಮಲವ ।
ವಿರಚಿಸಿದೊಡೆ ಚತುರಜನರು ಬಹುಕುಶಲತೆಯಿಂ ॥
ಸರಸಿಜದೊಳಗಿರುತಿರ್ಪಾ ।
ಪರಿಮಳವನ್ನದರೊಳಿರಿಸಿಬಲ್ಲರೆ ಚತುರರ್ ॥ ೫ ॥

ಪರದೇಶದಲ್ಲಿ ವಿದ್ಯೆಯು ।
ನರಳುತೆಬಿದ್ದಿರ್ದ ರೋಗಿಗೌಷಧ ಮಿತ್ರಂ ॥
ಮರಣವನೆಯ್ದುವನಿಗರಂ ।
ತರುಣಿಯು ಮನೆಯಲ್ಲಿ ಮಿತ್ರನಂತಿರುತಿರ್ಪಳ್ ॥ ೬ ॥

ಕೇಳುವರಿಲ್ಲದ ಸ್ಥಳದೊಳ್ ।
ಹೇಳುವ ತಾ ಪ್ರೌಢಿ ಗೆಯ್ವುದೇನಂ ಸಗ್ಗರ್ ॥
ಬಾಳುತಲಿಹ ದೇಶದೆ ಮಡಿ ।
ವಾಳನ ನೈಪುಣ್ಯವನ್ನು ಕೇಳುವರುಂಟೇ ॥ ೭ ॥

ನರಪನ ಬಲ ದುರ್ಬಲಸಿಗೆ ।
ನಿರುತದೊಳರ್ಭಕನಿಗೆ ರೋದನವೆ ಬಹುಬಲ ಕ ॥
ಸ್ಮರನಿಗೆ ಸತ್ಯದ ಬಹುಬಲ ।
ವಿರುವುದು ಮೂರ್ಖಂಗೆ ಮೌನದ ಬಲಂ ಧರೆಯೊಳ್ ॥ ೮ ॥

ರಸನಾಗ್ರದೆ ಸಿರಿಯಿರ್ಪಳು ।
ರಸನಾಗ್ರದೆ ಮಿತ್ರಬಂಧುಬಾಂಧವರಿರ್ಪರ್ ॥
ರಸನಾಗ್ರದಿಂದೆ ಬಂಧನ ।
ರಸನಾಗ್ರದೆ ಸಾವು ಬರುವುದಚ್ಚರಿಯಲ್ತೇ ॥ ೯ ॥

ಕುರುಡನಿಗೋರ್ವಂ ಮನುಜಂ ।
ಕರದೊಳು ನಿನಗೇಕೆ ದೀಪ ರಾತ್ರಿಯೊಳೆನ್ನಲ್ ॥
ಪರರಿಗೆ ನಾ ಕಾಣುತಿರಲ್ ।
ಸರಿವರು ದೂರೆನುತೆ ನಾನೆ ಪಿಡಿದಿಹೆನೆಂದಂ ॥ ೧೦ ॥

**ಉತ್ಪಲ ]**

ಧ್ಯಾನವಮಾಡಿ ಯೋಗಿಗಳು ನೀಚರು ತಮ್ಮಯ ಸರ್ವಪಾಪಮಂ ।
ಸ್ನಾನವಮಾಡಿ ಗಂಗೆಯೊಳು ಸ್ತ್ರೀಯರು ಗಂಡನಸೇವೆಮಾಡುತ ॥
ದಾನವಮಾಡಿ ಪಾತ್ರದೊಳಗೈಸಿರಿಯಿರ್ಪರು ಪೂರ್ಣಭಕ್ತಿಯಿಂ ।
ಜ್ಞಾನಿಗಳೆಲ್ಲ ವಿದ್ಯೆಯನು ಸಾಧಿಸಿ ಕ್ಷಾಲನವನ್ನುಗೆಯ್ವರ್ ॥ ೧೧ ॥

ಪಡಿಸಿದ ಪಸಿಯದು ಬುವಿಯೊಳ್ ।
ಗಡಸೆಯಿ ಬೆಳೆಯುತ್ತೆ ಚಂದಕಾಣುತಲಿರುವಾ ॥
ಗಿಡವಾಗಿ ಫಲವಸೀಯಲ್ ।
ಪಡುವರು ಸಂತೋಷವನ್ನು ಜಗದೋಳ್ ಸುಜನರ್ ॥ ೧೨ ॥

ಸಾವನ್ನಿಗವಿಾದೇಕ ।
ಕ್ಕೇವ್ರದು ಸುಖವನ್ನು ಸಾಲದಿಂ ಕುಡಿಪ್ಯತವುಂ ॥
ಜಿ ವವು ಪೋದೊಡೆ ದೇಹವು ।
ಪಾವಕನೊಳ್ ದಹಿಸೆ ತಿರುಗಿ ಬಾರದು ಮನುಜಾ ॥ ೧೩ ॥

**ಚಂಪಕ ॥**

ಬಲುಸುಡುವಂಥ ಲೋಹದೆ ಜಲಂ ಪೆಸರಿಲ್ಲದೆ ನಾಶವಪ್ಪುದು ।
ಜಲರುಹಪತ್ರದಲ್ಲಿ ಎಸೆಗುಂ ಕೆಲಕಾಲದೆ ಮುತ್ತಿನಂತೆವ್ರೋಲ್ ॥
ಜಲಧಿಯ ಸಿಂಪಿನೊಳ್ ಜನಿಸಗುಂ ಕೆಲಕಾಲದೆ ಮುತ್ತಿನಂತೆವ್ರೋಲ್ ।
ಜಲವು ಸಖಸ್ವದಿಂಥಮ ಸುಧ್ಯಮುಸದ್ಗುಣವನ್ನು ಪೊಂದಿತು ॥ ೧೪ ॥

**ಚಂಪಕ ॥**

ಅಜಗರ ವಾಯುಭಕ್ಷಣದೆ ನೈಜದಿ ದುರ್ಬಲವಾಗದೆಂದಿಗುಂ ।
ಗಜಗಳು ಘೋರಕಾನನದೆ ಸ್ವಲ್ಪನು ತಿಂದು ಬಲಿಷ್ಯವಾಗವೇ ॥
ಭಜಿಪದು ದೇವನಂ ಮುನಿವರೇಣ್ಯರು ಭಕ್ಷಿಸಿ ಗಡ್ಡೆ ಬೇರ್ಗಳಂ ।
ಸುಜನನು ಸೌಖ್ಯದಿಂದಿರಲು ತುಷ್ಟಿಯೆ ಸಂತತ ಮೂಲಕಾರಣಂ ॥ ೧೫ ॥

**ಚಂಪಕ ॥**

ಪರಸತಿಯನ್ನು ಭೋಗಿಸುವ ಬುದ್ಧಿಯದಿಂದ್ರನಿಗೆ ಪುಟ್ಟಿತೋ ।
ಹರಿಣದ ತರ್ಪ ಬುದ್ಧಿಯದು ರಾಮನ ಚಿತ್ತಕದೇಕೆ ಸಂದುದೋ ॥
ಧರಣಿಪಧರ್ಮ ಕೌರವರೊಳಕ್ಷವನಾಡಲದೇಕೆ ಪೋದನೋ ।
ನಿರುತ ಸುಶೀಲರಾಪಡೆಯು ಪೋಪುದು ಬುದ್ಧಿಯು ದುರ್ವಿಪಾಕದಿಂ ॥ ೧೬ ॥

ಅರಿವಂ ಬಲಿಷ್ಠ ಬಲಮುಂ ।
ನಿರುತಂ ಬಲವಿಲ್ಲದವನು ತಿಳಿವನೆ ಬಲಮಂ ॥
ಹರಿಯುವ ಬಲವನ್ನು ತಿಳಿವುದು ।
ಕರಿಯದು ಮೂಷಕವದೇನು ತಿಳಿವುದೇ ಬಲಮಂ ॥ ೧೭ ॥

ಧರೆಯೊಳು ಮಹಾತ್ಮಗಾದರ್ ।
ಜರುಗಿಸುವರು ಹೀನಕೃತ್ಯವನ್ನಾದಡೆಯುಂ ॥
ದ್ವಿರದವು ಸೂಚಿಕೆಯಿಂ ಪು ।
ಷ್ಕರದಿಂ ತಕ್ಕೊಳ್ಳುತಿಹುದು ನೆಲದೊಳಗಿಹುದಂ ॥ ೧೮ ॥

ಕೊಡುವವನ ಗೃಹಕೆ ಪೋಗಲು ।
ಪಡೆವನು ಬೇಡುವನು ಲಘುತ್ವಮಂ ಸಂತತದೊಳ್ ॥
ಪೊಡವೀಪಾಲಕಬಲಿವರ ।
ನೆಡೆಯಂ ಸಾರಲ್ಕೆ ಹರಿಯು ವಾಮನನಾದಂ ॥ ೧೯ ॥

ಮನೆಯೊಳು ನೆಲದೊಳು ಹುಗಿದಿಹ ।
ಧನದಿಂ ಧನವಂತನೆಂದು ತಿಳಿಯುತಲಿರ್ಪಾ ॥
ಧನವೇ ನಮ್ಮದು ಎನ್ನುತೆ ।
ಮನದೊಳು ತಿಳಿಯಲ್ಕೆ ಒಡವಗೇಂ ಬಾಧಕವೈ ॥ ೨೦ ॥

ಧರೆಯೊಳಗೆ ಮೂರು ರತ್ನಗ ।
ಳಿರುತಿರೆಯುಂ ಜಲಸುಭಾಷಿತಾನ್ನಂಗಳ್ ಮೂ ॥
ರ್ಖರು ಪಾಷಾಣದ ತುಂಡಿಗೆ ।
ಸರಸಾಗಿಹ ರತ್ನವೆಂಬುದಚ್ಚರಿಯಲ್ತೇ ॥ ೨೧ ॥

ಪರರ ಸುಖದಿಂದೆ ಸುಜನಗೆ ।
ನಿರುತದಿ ವಿಪ್ರನಿಗೆ ತುಷ್ಟಿ ಭೋಜನದಿಂದಂ ॥
ಬ್ಧರಗರ್ಜನೆಯಿಂ ಸೋಗೆಗೆ ।
ದುರುಳಗೆ ಸಂತುಷ್ಟಿಯಿಹುದು ಪರಪೀಡನೆಯಿಂ ॥ ೨೨ ॥

ನಿಮಗೊಂದು ಶರಣು ವೈದ್ಯರೆ ।
ಯಮನ ಸಹೋದರರು ನೀವು ನೈಜದಿ ಜಗದೊಳ್ ॥
ಯಮರಾಜನೊಯ್ವು ಹರಣವ ।
ನಿಮಿಷದೊಳೊಯ್ಯುವಿರಿ ನೀವು ಧನಹರಣಗಳಂ ॥ ೨೩ ॥

ಅತಿಪರಿಚಯವಿರ್ದೊಡೆಯೊಳ್ ।
ಸತತಂ ಪೋಗುವದರಿಂದನಾದರಮಕ್ಕುಂ ॥
ಪ್ರತಿನಿತ್ಯ ವನದೆ ಭಿಲ್ಲರ ।
ಸತಿಯರು ಚಂದನವನುರಿಸಿ ಪಾಕವಮಾಳ್ಪರ್ ॥ ೨೪ ॥

ಬೇರೆರಡು ಪದಾರ್ಥಗಳೊಳ್ ।
ವೈರತ್ವವತೀವವಿರಲು ಬೆರೆವುದಶಕ್ಯಂ ॥
ನೀರತಿ ಸುಡುತಿರ್ದೊಡೆಯೇ ।
ನಾರಿಸದೇ ಬಿಡುವುದಿಲ್ಲ ಬೆಂಕಿಯನೆಂದುಂ ॥ ೨೫ ॥

ವೈರಿಯ ಪಕ್ಷದೊಳಿಮ್ಮರ್ ।
ಸೇರಿರೆ ಬಹುಕಷ್ಟವನ್ನು ಕೊಡವುದು ಸಹಜಂ ॥
ಭೂರುಹಗಳ ಸಂಹರಿಸೆ ಕು ।
ಠಾರದೆಕಟ್ಟಿಗೆಯು ಸೇರದಿರ್ದೊಡಶಕ್ಯಂ ॥ ೨೬ ॥

ಬಾಳಿರೆ ಮನುಜನು ಸುಖದಿಂ ।
ವೇಳೆಯ ಕಳೆಯದಲೆಯರವ ಗೆಯ್ವುದು ಯುಕ್ತಂ ॥
ಕಾಳೊಳಗೆ ಹೊಲಸು ಕೂಡಿರೆ ।
ಗಾಳಿಯು ಬಿಟ್ಟಾಗ ತೂರಿಕೊಳ್ವರು ಸುಜನರ್ ॥ ೨೭ ॥

ಕೊಡುವನು ಬೇಡುವ ಗುಟ್ಟಿನ ।
ನುಡಿಯಂ ಹೇಳುವನು ಕೇಳ್ವನೂಟಕೆ ಬರ್ಪಂ ॥
ತಡೆಯದೆ ಕರೆಯುವ ನೂಟಕೆ ।
ಪೊಡವಿಯೊಳನುರಾಗವಿಂತು ಷಡ್ವಿಧಮಿರ್ಕಂ ॥ ೨೮ ॥

ಅರಿವಂ ಬಲಿಷ್ಠ ಬಲಮುಂ ।
ನಿರುತಂ ಬಲವಿಲ್ಲದವನು ತಿಳಿವನೆ ಬಲಮಂ ॥
ಹರಿಯುವ ಬಲವನ್ನು ತಿಳಿವುದು ।
ಕರಿಯದು ಮೂಷಕವದೇನು ತಿಳಿವುದೇ ಬಲಮಂ ॥ ೧೭ ॥

ಧರೆಯೊಳು ಮಹಾತ್ಮರಾದರ್ ।
ಜರುಗಿಸುವರು ಹೀನಕೃತ್ಯವನ್ನಾದಡೆಯುಂ ॥
ದ್ವಿರದವು ಸೂಚಿಕೆಯುಂ ಪು ।
ಷ್ಕರದಿಂ ತಕ್ಕೊಳ್ಳುತಿಹುದು ನೆಲದೊಳಗಿಹುದಂ ॥ ೧೮ ॥

ಕೊಡುವವನ ಗೃಹಕೆ ಪೋಗಲು ।
ಪಡೆವನು ಬೇಡುವನು ಲಘುತ್ವಮಂ ಸಂತತದೊಳ್ ॥
ಪೊಡವೀಪಾಲಕಬಲಿವರ ।
ನೆಡೆಯಂ ಸಾರಲ್ಕೆ ಹರಿಯು ವಾಮನನಾದಂ ॥ ೧೯ ॥

ಮನೆಯೊಳು ನೆಲದೊಳು ಹುಗಿದಿಹ ।
ಧನದಿಂ ಧನವಂತನೆಂದು ತಿಳಿಯುತಲಿರ್ಪಾ ॥
ಧನವೇ ನಮ್ಮದು ಎನ್ನುತೆ ।
ಮನದೊಳು ತಿಳಿಯಲ್ಕೆ ಒಡವಗೇಂ ಬಾಧಕವೈ ॥ ೨೦ ॥

ಧರೆಯೊಳಗೆ ಮೂರು ರತ್ನಗ ।
ಳಿರುತಿರೆಯುಂ ಜಲಸುಭಾಷಿತಾನ್ನಂಗಳ್ ಮೂ ॥
ರ್ಖರು ಪಾಷಾಣದ ತುಂಡಿಗೆ ।
ಸರಸಾಗಿಹ ರತ್ನವೆಂಬುದಚ್ಚರಿಯಲ್ತೇ ॥ ೨೧ ॥

ಪರರ ಸುಖದಿಂದೆ ಸುಜನಗೆ ।
ನಿರುತದಿ ವಿಪ್ರನಿಗೆ ತುಷ್ಟಿ ಭೋಜನದಿಂದಂ ॥
ಬ್ಧರಗರ್ಜನೆಯಿಂ ಸೋಗೆಗೆ ।
ದುರುಳಗೆ ಸಂತುಷ್ಟಿಯಿಹುದು ಪರಪೀಡನೆಯಿಂ ॥ ೨೨ ॥

ನಿಮಗೊಂದು ಶರಣು ವೈದ್ಯರೆ ।
ಯಮನ ಸಹೋದರರು ನೀವು ನೈಜದಿ ಜಗದೊಳ್ ॥
ಯಮರಾಜನೊಯ್ವ ಹರಣವ ।
ನಿಮಿಷದೊಳೊಯ್ಯುವಿರಿ ನೀವು ಧನಹರಣಗಳಂ ॥ ೨೩ ॥

ಅತಿಪರಿಚಯವಿರ್ದೊಡೆಯೊಳ್ ।
ಸತತಂ ಪೋಗುವದರಿಂದನಾದರಮುಕ್ಕುಂ ॥
ಪ್ರತಿನಿತ್ಯ ವನದೆ ಭಿಲ್ಲರ ।
ಸತಿಯರು ಚಂದನವನುರಿಸಿ ಪಾಕವಮಾಳ್ಪರ್ ॥ ೨೪ ॥

ಬೇರೆರಡು ಪದಾರ್ಥಗಳೊಳ್ ।
ವೈರತ್ವವತೀವವಿರಲು ಬೆರೆವುದಶಕ್ಯಂ ॥
ನೀರತಿ ಸುಡುತಿರ್ದಡೆಯೇ ।
ನಾರಿಸದೇ ಬಿಡುವುದಿಲ್ಲ ಬೆಂಕಿಯನೆಂದುಂ ॥ ೨೫ ॥

ವೈರಿಯ ಪಕ್ಷದೊಳೆಮ್ಮರ್ ।
ಸೇರಿರೆ ಬಹುಕಷ್ಟವನ್ನು ಕೊಡವುದು ಸಹಜಂ ॥
ಭೂರುಹಗಳ ಸಂಹರಿಸೆ ಕು ।
ಠಾರದೆಕಟ್ಟಿಗೆಯು ಸೇರದಿರ್ದಡಶಕ್ಯಂ ॥ ೨೬ ॥

ಬಾಳಿರೆ ಮನುಜನು ಸುಖದಿಂ ।
ವೇಳೆಯ ಕಳೆಯದಲೆಯರವ ಗೆಯ್ವುದು ಯುಕ್ತಂ ॥
ಕಾಳೊಳಗೆ ಹೊಲಸು ಕೂಡಿರೆ ।
ಗಾಳಿಯು ಬಿಟ್ಟಾಗ ತೂರಿಕೊಳ್ವರು ಸುಜನರ್ ॥ ೨೭ ॥

ಕೊಡುವನು ಬೇಡುವ ಗುಟ್ಟಿನ ।
ನುಡಿಯಂ ಹೇಳುವನು ಕೇಳ್ವನೂಟಕೆ ಬರ್ಪಂ ॥
ತಡೆಯದೆ ಕರೆಯುವ ನೂಟಕೆ ।
ಪೊಡವಿಯೊಳನುರಾಗವಿಂತು ಷಡ್ವಿಧಮಿರ್ಕಂ ॥ ೨೮ ॥

**ಚಂಪಕ ||**

ಶಿರದೊಳಗೇನು ಚಂದಿರನದೇಕಿಹ ಮೌಲಿಯೊಳಂಗವಲ್ಲಿ ತಾ ।
ಧರಿಸಿಹನೇಕೆ ಭಸ್ಮವನುಟೊಂಕದೆ ಕಟ್ಟಿಹನೇಕೆ ಸರ್ಪವ ॥
ನ್ನುರುತರ ದೀರ್ಘಲಂಬಣವದೇಂ ಜಘನಾಂತದೊಳಿಂದಿಭಾಸ್ಯನ ।
ಚ್ಚರಿವಡೆಕೇಳೆ ತಾಯಿಯನು ಲಜ್ಜಿತಳಾಗಿಹಗೌರಿ ಕಾಯುವಳ್ ॥ ೭೯ ॥

ಕರದೊಳಗೆ ಕ್ಷಮೆಯೆಂಬ ಶಸ್ತ್ರವ ।
ಧರಿಸಿರೆ ಮಾಡುವರದೇನು ದುಷ್ಟಾತ್ಮರ್ ವು ॥
ಲ್ಲಿರದಿಹ ನೆಲದೊಳು ಬಿದ್ದಿಹ ।
ಮರುತ್ಸಖಂ ತಾನೆ ನಂದಿ ಹೋಗುವತೆರದೊಳ್ ॥ ೨೦ ॥

ಮತಿಹೀನ ನೋಡೆ ಮೂರ್ಖನ ।
ನತಿಶಯ್ದ ತಂವಾಗುತಿಹುದು ಗಂಧದನ್ರೋಲ್ ಪಾ ॥
ಡಿತನನ್ನೀಕ್ಷಿಸೆ ತನ್ನಯ ।
ಪಿತನಂ ಕೊಂದವನತೆರದಿ ಕಾಣುತ್ತಿರ್ಪಂ ॥ ೨೧ ॥

ಚರಿಸಲು ಬಹುದೈ ವನದೊಳ್ ।
ಗಿರಿಯಲಿ ದುರ್ಗದಲಿಕೂಡಿ ವನಚರರಿಂದಂ ॥
ಸುರಲೋಕದೊಳಾದಪಡೆಯುಂ ।
ಸರಸವು ಮತಿಹೀನಸಂಗ ಬೇಡೆನುಗೆಂಬರ್ ॥ ೨೨ ॥

ಪಡೆವಲ್ಪಬುದ್ಧಿಯುಳ್ಳವ ।
ಕಡುತರಮಾನವನು ವಿಬುಧರಿಲ್ಲದ ಸ್ಥಳದೊಳ್ ॥
ಗಿಡುಮರಗಳಿಲ್ಲದಿರ್ದಾ ।
ಪೊಡವಿಯೊಳೇಂರಡಭೂಜವೇ ಬಹುಶ್ರೇಷ್ಠ ॥ ೨೩ ॥

ಉರಗಕ್ಕೆ ವಿಷವುದಂತದೊ ।
ಳಿರುವುದು ವೃಶ್ಚಿಕಕೆ ವಿಷವು ಬಾಲದ ತುದಿಯೊಳ್ ॥
ಶಿರದೊಳು ಮಶಕಕ್ಕಿರುವದು ।
ದುರುಳನ ಸರ್ವಾಂಗದಲ್ಲಿ ತುಂಬಿಹುದು ವಿಷಂ ॥ ೨೪

ವನಧಿಯ ಮಂಥನಕಾಲದೆ ।
ಜನಿಸಿದವಿಷದಿಂದೆ ಜಗವು ತಲ್ಲಣಗೊಳ್ಳಿರ್ ॥
ಮನಸಿಜವೈರಿಯದಂ ತಾ ।
ಬಿನದದಿ ಕಂಠದಲಿ ಧರಿಸಿ ಜಗಮಂ ಕಾಯ್ದಂ ॥ ೩೫ ॥

ಹರಿಯುಟ್ಟ ಪೀತವಸನವ ।
ಶರಧಿಯು ನೋಡಲ್ಕೆ ಮುದದಿ ಸಿರಿಯನ್ನಿತ್ತಂ ॥
ಗಿರಿಜೇಶನುಟ್ಟುಕೊಂಡಿಹ ।
ದ್ವಿರದಾಜಿನವನ್ನು ನೋಡಿ ವಿಷವನ್ನಿತ್ತಂ ॥ ೩೬ ॥

ಬೆರೆತಿರೆ ಕಡಿಮೆಯ ಧಾತುವು ।
ತರತರದಾಭರಣಗಳನು ಹೇಮದೆ ಮಾಳ್ಪರ್ ॥
ಧರೆಯೊಳ್ ಸುಜನರ ಕೀರ್ತಿಯು ।
ದುರುಳನ ಸಂಸರ್ಗದಿಂದೆ ಬೆಳೆವುದು ಸಹಜಂ ॥ ೩೭ ॥

ತಡೆಯದೆ ದುರಿತಂ ಪೋವುದು ।
ನುಡಿಯಲು ರಾಕ್ಷರವ ಮತ್ತೆ ಬರಬಹುದೆಂಬಾ ॥
ಕಡುತರ ಸಂಶಯದಿಂದಂ ।
ಗಡಸೆಯೆ ರಾಕ್ಷರವ ಕದದ ತೆರದೊಳು ನುಡಿವರ್ ॥ ೩೮ ॥

ಶರಧಿಯು ಸೀಯಾದಡೆಯುಂ ।
ಸರಸೀರುಹಮಿತ್ರ ಶೈತ್ಯಮಂ ಪೊಂದಿದಡಂ ॥
ಗರುಡಂ ಬಳಲ್ದೊಡೆ ವಿಷದಿಂ ।
ದುರುಳರ ಕಾಪಟ್ಯವನ್ನು ತಿಳಿಯಲು ಬಹುದೇ ॥ ೩೯ ॥

ನರರಿಗೆ ಸಿರಿಯಹ ಸಮಯದೊ ।
ಳಿರುತಿಹ ಗರ್ವವನು ಸಿರಿಯು ಪೋಗಿರುವಾಗಳ್ ॥
ತಿರಿದುಂಡಡೆಯುಂ ಬಿಡರೀ ।
ಧರೆಯೊಳಗೈಸಿರಿಯ ಮಹಿಮೆಯಿಂತತಿ ಘೋರಂ ॥ ೪೦ ॥

ಗಹಗಹಿಸಿ ನಗುವದೀಧರೆ ।
ಮುಹಮುಹಮೆನ್ನುತ್ತಲಿಹರ ನುಡಿಯಂ ಕೇಳಲ್ ॥
ಬಹುನೃಪರಾಳಿರೆ ಪೂರ್ವದೆ ।
ಮಹಿಯದು ಸತ್ತಿರ್ಪ ನೃಪರನನುಸರಿಸಿಲ್ಲಂ ॥ ೪೧ ॥

ಮರ್ಮವ ತಿಳಿಯುತೆ ವೇದದ ।
ಕರ್ಮವ ನಳಿಯುತ್ತೆ ದೇವಸಂಕೀರ್ತನದಿಂ ॥
ಧರ್ಮದೆ ನಡೆವವನಂ ಯಮ ।
ಧರ್ಮಂ ಹೆದರುತ್ತಲಿರ್ಪನವನನ್ನೊಯ್ಯಲ್ ॥ ೪೨ ॥

ಧರೆಯೊಳು ಬಿಳಿಗಾಗೆಗಳಂ ।
ಶರಧಿಯೊಳಿರುತಿರ್ಪ ಮತ್ಸ್ಯಪದಗಳನಾದುಂ ॥
ಬರುಕುಸುಮಗಳಂ ಕಾಣಲ್ ।
ಬರುವದು ನಾರಿಯರ ಮನವ ಕಾಣ್ಬುದಶಕ್ಯಂ ॥ ೪೩ ॥

ಚೂರಿಯ ತೆರದೊಳಗಿಹರಥಿ ।
ಕಾರಿಗಳ್ಗೆ ಫಲದತೆರದಿ ಸೇವೆಯ ಗೆಯ್ವಗ್ ॥
ಚೂರಿಯು ಪಣ್ಣಿಗೆ ಬಡಿಯಲ್ ।
ತೋರುವದೈ ಕೇಡು ಫಲವು ಚೂರಿಗೆ ಬಡಿಯಲ್ ॥ ೪೪ ॥

ಸ್ವರಮಿಹುದು ಪಿಕಕೆ ರೂಪಂ ।
ತರುಣಿಯರಿಗೆ ಪಾತಿವ್ರತ್ಯಮಿರ್ಪುದು ರೂಪಂ ॥
ನರರಿಗೆ ವಿದ್ಯೆಯು ತಪವಾ ।
ಚರಿಸುವನಿಗೆ ಕ್ಷಮೆಯು ರೂಪಮಾಗಿಹುದಲ್ತೇ ॥ ೪೫ ॥

ಮನೆಯೊಳು ಬಂದತಿಥಿಗಳಂ ।
ಬಿನದದಿ ಸತ್ಕರಿಸಿಯನ್ನವೀಯುತಲಿರ್ಪಾ ॥
ಜನನಿಯು ಜನಕರ ಸೇವೆಯ ।
ನನುನಯದಿಂ ಗೆಯ್ವ ನರನ ಪುಣ್ಯಕ್ಕೆಣೆಯೇ ॥ ೪೬ ॥

ಮರಣವು ಬರ್ಪುದು ನಿಶ್ಚಯು ।
ಭರದಿಂ ಸತ್ಕರ್ಮಗಳನು ಮಾಳ್ಪುದು ಯುಕ್ತಂ ॥
ಪರದಲ್ಲಿ ನಿನ್ನ ಕರ್ಮವು ।
ಬರುವದು ದೇಹವನು ಛಾಯೆಯನುಸರಿಸುವವೋಲ್ ॥ ೪೭ ॥

ಸಿರಿ ಬರೆ ಕಷ್ಟವದೊದಗಲ್ ॥
ಗರುವಿಕೆಯಂ ದುಃಖವನ್ನು ಹೊಂದರು ಸುಜನರ್ ॥
ತರಣಿಯುದಯಿಸುವ ವೇಳೆಯೊ ।
ಳರುಣಂ ಮೇಣಸ್ತಮಿಸುವ ವೇಳೆಯೊಳರುಣಂ ॥ ೪೮ ॥

ದುರುಳರ ಪ್ರೀತಿಯು ನೋಡದ ।
ನೆರಳುಂ ಸಂಪತ್ತು ನಾರಿಯರು ಯೌವನವುಂ ॥
ಸರಸಾದನ್ನಂ ಧರೆಯೊಳ ।
ಗಿರುವವು ಕ್ಷಣಭಂಗುರಸುಖದಪದಾರ್ಥಂಗಳ್ ॥ ೪೯ ॥

ಉತ್ಪಲ ॥

ಆರವರೆನ್ನೆ ಶೂಲಿಯಿಹೆ ಭೇಷಜಮಂ ಕುಡಿ ನೀಲಕಂಠನಾಂ ।
ತೋರಿಸು ಕೂಗಿ ಕೇಕೆಯೊಲು ಸ್ಥಾಣವು ನಾ ಗಿಡಕುಂಟೆ ಮಾತುಗಳ್ ॥
ನಾರಿಯೆ ನಾ ಶಿವೇಶನಿಹೆ ಕಾನನದಲ್ಲಿರು ಪೋಗು ನೀನೆನಲ್ ।
ಗೌರಿಯ ಮಾತಿಗುತ್ತರವನೀಯದ ಮುಗ್ಧಗಿರೀಶ ಕಾಯುವಂ ॥ ೫೦ ॥

ನಿರುತದೊಳಶಕ್ತಸಾಧುವು ।
ಕುರೂಪೆಯಪ್ಪಳು ಪತಿವ್ರತೆ ರೋಗಿಷ್ಠಂ ದೇ ॥
ವರಭಕ್ತನು ತಾನಾಗುವ ।
ಚರಿಸುವದಚ್ಚರಿಯೆ ಲಗ್ನವಿಲ್ಲದೆ ಬಡವಂ ॥ ೫೧ ॥

ದುರುಳರ ಮಧ್ಯದೆ ಸಜ್ಜನ ।
ನಿರುತಿರೆ ತದ್ದ್ರೋಷವನ್ನು ಪೊಂದುವದಿಲ್ಲಂ ॥
ಉರಗಗಳೆಲ್ಲವು ಚಂದನ ।
ತರುವಂ ಸುತ್ತಿರಲು ವಿಷವು ಬರ್ಪುದೆ ಗಿಡದೊಳ್ ॥ ೫೨ ॥

ಮಲಗಿಹಳು ಲಕುಮಿ ಕಮಲದೆ ।
ಜಲಧಿಯೊಳೊರಗಿಹನು ಮಾಧವಂ ನಿರುತದೊಳಂ ॥
ಮಲಯದೆ ಮಲಗಿಹ ಶೂಲಿಯು ।
ನಿಲಯದೆ ಮತ್ಕುಣದ ಕಾಟವತಿಶಯವಾಗಲ್ ॥ ೫೩ ॥

ಕಲಹವನು ಮಾಡಿ ಮೂರ್ಖರ್ ।
ಕಳೆವರು ವೇಳೆಯನು ನಿದ್ರೆಯೊಳ್ ವ್ಯಸನದೊಳಂ ॥
ಸಲೆ ತುತಿಸುತಲೀಶ್ವರನಂ ।
ಸುಲಲಿತ ಕಾವ್ಯಗಳನೋದಿ ಕಳೆವರು ವಿಬುಧರ್ ॥ ೫೪ ॥

ಸರಸೀರುಹದಲ ಮಧ್ಯದೊ ।
ಳರ ಸಂಚೆಯು ತುರಗಮೆಸೆವುತಿರ್ಪುದು ರಣದೊಳ್ ॥
ಗಿರಿಗಂಹರಕಂದರದೊಳ್ ।
ಹರಿ ನೃಪರಾಸ್ಥಾನದಲ್ಲಿ ವಿಬುಧ ಪ್ರಕರಂ ॥ ೫೫ ।

ತುರಗವು ಖರಗಳ ಮಧ್ಯದೊ ।
ಳರಸಂಚೆಯು ಕಾಕವೃಂದದಲಿ ಶೋಭಿಪುದೇ ॥
ನರಿಗಳ ಮಧ್ಯದೆ ಸಿಂಹಂ ।
ನಿರಕ್ಷರರೆಡೆಯಲ್ಲಿ ವಿಬುಧನೆಸೆಯುತ್ತಿಹನೇ ॥ ೫೬ ॥

**ಚಂಪಕ ॥**

ಸಿರಿಯುತ ದಾನಮಂಕೊಡಲು ಪಾತ್ರದೊಳೈಸಿರಿಯನ್ನು ಪಡೆಯುವಂ ।
ದೊರೆದಿಹ ವಿತ್ತದಿಂ ಸಕಲಪುಣ್ಯದ ಕೃತ್ಯಗಳನ್ನು ಮಾಡುವಂ ॥
ಸುರರಿಹ ಲೋಕಸೌಖ್ಯವನೆ ಪೊಂದುವ ಪೂರ್ವದಪುಣ್ಯಶೇಷದಿಂ ॥
ಧರೆಯೊಳು ಮತ್ತೆ ಪುಟ್ಟುವನು ವೈಭವದಿಂ ಮೆರೆಯುತ್ತಲಿರ್ಪವಂ । ೫೭ ॥

ದುರುಳನು ತಪಮಂಗೈಯ್ಯುತೆ ।
ವರಮಂ ಪಡೆದಿರ್ದರಲ್ಲಿ ಕೇಡಂ ಬಗೆವರ್ ॥
ಗಿರಿಶನನೊಲಿಸಿದ ಭಸ್ಮಾ ।
ಸುರನು ಮಹೇಶ್ವರನ ಶಿರದೆ ಕರವಿಡೆ ಪೋದಂ ॥ ೫೮ ॥

ನಿರುತ ಮಹಾತ್ಮರು ಪೊಂದುತ ।
ಲಿರುವರು ಸುಖ ದುಃಖಗಳನು ಹೀನರು ಪೊಂದರ್ ॥
ಶರನಿಧಿಜಾತಂ ಪಡೆಯು ।
ತ್ತಿರುವನು ಕ್ಷಯವೃದ್ಧಿಗಳನು ಪೊಂದದು ಭಗಣಂ ॥ ೫೯ ॥

ಕಡುಧನವಿಹ ನಿರ್ಬಲನಂ ।
ಕೊಡುವುದು ಬಹುಧನವನೆಂದು ಬಲಯುತ ಕೇಳಲ್ ॥
ಮಿಡುಕುತ್ತಿವನಿಗೆ ಕೊಡದಿರೆ ।
ಜಡಿದೊಯ್ಯುವನೆನುತೆ ಸಾಲವೀಯುವನೆಂಬಂ ॥ ೬೦ ॥

ಭಾರತ ಪಂಚಮವೇದ ಕು ।
ಮಾರನು ಸಪ್ತಮರಸ ದಶಮಗ್ರಹನಳಿಯಂ ॥
ಮೀರಿದ ದಾನವ ಗೆಯ್ವವ ।
ಘಾರುಣಿಯೊಳು ಪಂಚದಶಮರತ್ನದ ತೆರದೊಳ್ ॥ ೬೧ ॥

ತರಳರೆ ವಿದ್ಯೆಯ ಕಲಿವುದು ।
ಬರಲಾರದು ಮುಂದೆ ನಿಮಗೆ ವೃದ್ಧಾಪ್ಯದೊಳಂ ॥
ಧರೆಯೊಳಗೆ ಪುಟ್ಟಿ ಬಳೆಯುವ ।
ತರುವಂ ಬಗ್ಗಿಸಲು ಬಹುದು ಸಸಿಯಿರುವಾಗಳ್ ॥ ೬೨ ॥

ದಿನದಿನಕೆ ಸ್ವಲ್ಪ ವಿದ್ಯೆಯ ।
ಮನಸಿಂ ಕಲಿಯಲ್ಕೆ ಜಗದೆ ಪಂಡಿತನಪ್ಪಂ ॥
ವನನಿಧಿಯಲಿ ವಿದ್ರುಮಚೀ ।
ತನಗಳ್ ದುಡಿಯೆ ಭೂಮಿ ಪುಟ್ಟುವ ತೆರದೊಳ್ ॥ ೬೩ ॥

ದುರುಳರು ಶಪಥದೆ ಪೇಳ್ವೊಡೆ ।
ಬರೆದಂದದಿ ಲೇಖವನ್ನು ಸಲಿಲಾಂತರದ ॥
ಲ್ಲರೆಯಲ್ಲಿ ಬರೆದ ಲಿಪಿಯಂ ।
ತಿರುವದು ಸಾಧುಗಳು ಸಹಜದಿಂದಂ ನುಡಿಯಲ್ ॥ ೬೪ ॥

ಧರೆಯನು ಜಯಿಸುತ್ತಿರ್ಪಂ ।
ನರವಂ ಚತುರಂಗ ಬಲದ ಬಹುಕುಶಲತೆಯಿಂ ॥
ನಿರುತದೆ ಪಂಚಾಂಗದ ಬಲ ।
ವಿರುತಿರೆ ವ್ಯೋಮವನು ಗಣಕ ಗೆಲ್ಲುತ್ತಿರ್ಪಂ ॥ ೬೫ ॥

ಕುರುಡಗೆ ವ್ಯರ್ಥಂ ದೀಪಂ ।
ಖರಸೂಕರಗಳ್ಗೆ ವಿಪುಲ ಮೃಷ್ಟಾನ್ನಂ ವಾ ॥
ನರನಿಗೆ ರತ್ನದ ಹಾರವು ।
ನಿರುತದಿ ಮೂರ್ಖಂಗೆ ಶಾಸ್ತ್ರಯುಕ್ತವಚಂಗಳ್ ॥ ೬೬ ॥

ಪರಪೀಡೆ ಪಾಪ ಮೂಲಂ ।
ದುರಿತವು ಮತ್ಸರದ ಮೂಲವಾಗಿರುವಸು ಮ ।
ತ್ಸರವದು ದುಃಖದ ಮೂಲಂ ।
ನಿರುತಂ ಮಾಡಿರ್ದ ಕರ್ಮ ದುಃಖದ ಮೂಲಂ ॥ ೬೭ ॥

ತರುಣಿಯು ರತಿಸುಖವಾಲದ ।
ನೆರಳುಂ ತಂಬುಲವು ಕೂಪದುದಕಂಗಂಧಂ ॥
ಭರದಿಂ ಶೀತವನುಷ್ಣವ ।
ನಿರುತದೊಳೀವವು ನಿದಾಘಹಿಮಸಮಯಗಳೊಳ್ ॥ ೬೮ ॥

ಕರೆವವು ಗೋಗಳು ದುಗ್ಧವ ।
ಹರಿವವು ಕಾಲೂರ್ಗಳೆಲ್ಲ ಸಲಿಲವ ನೀಯಲ್ ॥
ಮರಗಳು ಪಣ್ಗಳನೀವವು ।
ಪರೋಪಕಾರಕ್ಕೆ ಸುಜನಜೀವಿತವಲ್ತೇ ॥ ೬೯ ॥

ಉಳಿಸುವರರ್ಥವ ಜಾಣರ್ ।
ಕಳೆಯುತಲಿಹ ಸಮಯದಲ್ಲಿ ಸಕಲ ಪದಾರ್ಥಂ ॥
ಘಳಿಲನೆ ಉಳಿದಿರುವರ್ಥದೆ ।
ಬೆಳೆಸಲು ಬರುತಿಹುದು ಪೋಗೆ ಸರ್ವವುಕಷ್ಟಂ ॥ ೭೦ ॥

ಮರಣವ ರಾಷ್ಟ್ರದ ಚಿತ್ತವ ।
ದುರುಳರ ವಾಂಛಿತಗಳನ್ನು ನರರೈಸಿರಿಯಂ ॥
ತರುಣಿಯ ಚರಿತೆಯು ಸುಮನಸ ।
ರರಿಯಲ್ಕಸಮರ್ಥರಿರಲು ಮರ್ತ್ಯರ ಪಾಡೇಂ ॥ ೭೧ ॥

ಹರಿಣವ ಕೊಲ್ವುದು ಸಿಂಹಂ ।
ಹರಿಯಂ ಕೊಲ್ಲುತ್ತಲಿಹುದು ಶರಭಂ ವನದೊಳ್ ॥
ಶರಭವ ಕೊಲ್ವುದು ದ್ವಿಶಿರಂ ।
ಧರೆಯೊಳು ಕೊಲ್ಲುತ್ತಲಿರ್ಪರೋರ್ವರನೋರ್ವರ್ ॥ ೭೨ ॥

ಅರಿವವು ಪಶುಗಳು ಗಂಧದೆ ।
ಅರಿವರು ಪಂಡಿತರು ಸತತ ವೇದಗಳಿಂದಂ ॥
ನರಪಂ ಚಾರರ ಮುಖದಿಂ ।
ದರಿಯುತ್ತಿಹರುಳಿದರೆಲ್ಲ ನೇತ್ರಗಳಿಂದಂ ॥ ೭೩ ॥

ನರನುದ್ಯೋಗವ ಮಾಡಲ್ ।
ನಿರುತದಿ ಫಲವನ್ನು ಪಡೆವ ಮಾರ್ಜಾರದವೋಲ್ ॥
ತುರುಗಳು ಮನೆಯೊಳಗಿಲ್ಲದೆ ।
ಚರಿಸುವದೈ ಪಾಲಕುಡಿದು ಸಂತಸದಿಂದಂ ॥ ೭೪ ॥

ಬಡವನ ಮೂರ್ಖನ ಶಠನಂ ।
ಕಡುತರಕೋಪವನು ತಾಳುತಿರ್ಪಾನರನಂ ॥
ಕುಹಕನ ಸಟೆಯಂ ನುಡಿವನ ।
ಬಿಡುವದು ಕೈಮುಗಿದು ದೂರದಿಂದಂ ನೋಡಲ್ ॥ ೭೫ ॥

ಹರಿಣಕೆ ಮಾಂಸವು ದಂತಂ ।
ದ್ವಿರದಕೆ ಸಿಂಹಕ್ಕೆ ತೊವಲು ವೃಕ್ಷಕೆ ಫಲಗಳ್ ॥
ತರುಣಿಯರಿಗೆ ಲಾವಣ್ಯಂ ।
ತರಳರಿಗಾಭರಣ ಹಾನಿಕಾರಕವಲ್ತೇ ॥ ೭೬ ॥

ಬರೆಯುತ್ತೋದುತೆ ನೋಡ ತ ।
ಲಿರಿವುತೆ ವಿದ್ವಾಂಸರೊಡನೆ ಮಾತನ್ನಾಡು ॥
ತ್ತಿರುವವನ ಬುದ್ಧಿ ಬಳೆವುದು ।
ಸರೋಜಮಿನಕಿರಣದಿಂದೆ ವಿಕಸಿಪ ತೆರದೊಳ್ ॥ ೭೭ ॥

**ಚಂಪಕ ॥**

ಪುರುಡಿಸುತಿರ್ಪ ಮಂತ್ರಿಯನ್ನು ಕಾರ್ಯದೆ ಭೋಜನದಲ್ಲಿ ಮಾತೆಯಂ
ಕರುಣೆಯೊಳೇಳಿಸುತ್ತಿರುವ ದಾಸಿಯನಪ್ಸರೆಯನ್ನು ಶಯ್ಯೆಯೊಳ್ ॥
ಜರೆಯುತಿಲಿರ್ಪ ಶಾಂತಿಯೊಳು ಚಂದಿರನಂ ಕ್ಷಮೆಯಲ್ಲಿ ಧಾತ್ರಿಯಂ ।
ಸರಸಿಜಜಾತೆಯಂತೆಸೆಯುತಿರ್ಪಳು ಷಡ್ಗುಣಯುಕ್ತಭಾರ್ಯೆಯಳ್॥ ೭೮ ॥

ಮನುಜನೆ ಹಂಚಿಕೆಯಂ ತಿಳಿ ।
ಘನತರ ಸಂಕಟಕೆ ಮೊದಲೆ ಜಾಗ್ರತೆಯಿಂದಂ ॥
ಮನೆಯದು ಸುಡುತಿರೆ ಭರದಿಂ ।
ದನಿಲದೆ ಬಾವಿಯನು ತೋಡುತಿರುವುದು ಸರಿಯೇ ॥ ೭೯ ॥

ತಾರಾಗಡಣಕೆ ಚಂದ್ರಂ ।
ನಾರಿಯರಿಗೆ ಪತಿಯು ಭೂಷಣಾಸ್ಪದನಿರ್ಪಂ ॥
ಧಾರುಣಿಗರಸಂ ಭೂಷಣ ।
ಶೂರಗೆ ಸಂಗ್ರಾಮಮರಣ ಭೂಷಣವಲ್ತೇ ॥ ೮೦ ॥

ವಲಯವು ಮಣಿಯಿಂದಂ ಮಣಿ ।
ವಲಯದೆ ಶೋಭಿಪುದು ಕರವು ಮಣಿವಲಯಗಳಿಂ ॥
ಜಲಜದೆ ಭ್ರಮರಂ ಭ್ರಮರದೆ ।
ಜಲಜಂ ಸರಸಿಯದು ಭ್ರಮರ ಜಲಜಾತಗಳಿಂ ॥ ೮೧ ॥

# ೨ನೇ ಭಾಗ

## ಸಂಸ್ಕೃತ ಶ್ಲೋಕಗಳ ಭಾವಾನುವಾದಗಳು



ವನನಿಧಿತನುಜಂ ಚೋರಗೆ ।
ವನಿತೆಯರಿಗೆ ವೃದ್ಧನಾದ ಪತಿಯರಿರೂಪಂ ॥
ಮನಸಿಜಗೀಶ್ವರ ವೈರಿಯು ।
ತನಯಗೆ ಬಹುವಿದ್ಯೆಯನ್ನು ಕಲಿಸದ ಜನಕಂ ॥ ೮೨ ॥

ಇರಿಗಿರೆ ಪುತ್ರನದೋರ್ವಂ ।
ಪರಮಾನಂದದಲಿ ಮಲಗುವದು ನಿರ್ಭಯದಿಂ ॥
ಇರಕಿರೆ ಪುತ್ರರು ಹಲಬರ್ ।
ಹೊರುವದು ಭಾರವನು ಕೂಡಿ ತನ್ನಯಸುತರಿಂ ॥ ೮೩ ॥

ಅಮೃತಂ ಪವನವು ಶಿಶಿರದೊ ।
ಅಮೃತವು ಸನ್ಮಾನವನ್ನು ಪಡೆವುದು ನೃಪನಿಂ ॥
ಅಮೃತವು ಮಿತ್ರನ ದರ್ಶನ ।
ಅಮೃತವು ಬಾಲಕನ ಹಾಸ್ಯಮುಖಚುಂಬನವುಂ ॥ ೮೪ ॥

ಅರಿವೆಗಳಾತಪದಿಂದಂ ।
ತುರಗಂಗಳನಧ್ವದಿಂದೆ ಪಡೆವವು ಮುಪ್ಪಂ ॥
ನರ ಚಿಂತೆಯಿಂದೆ ಪಡೆವಂ ।
ತರುಣಿಯಸಂಭೋಗದಿಂದೆ ಮುಪ್ಪಾಗುತಿಹಳ್ ॥ ೮೫ ॥

**ಚಂಪಕ ||**

ಸೊರಗಲು ದೇಹಶಕ್ತಿಯದು ಕುಂದಿಸೆ ಪೋಗಲು ಸರ್ವದಂತಗಳ್ ।
ಕರದೊಳಗಿರ್ಪ ಕೋಲಿನ ಸಹಾಯದೆ ಕಾಲ್ಗಳನೆತ್ತಿಹಾಕಲು ॥
ಸುರಿಯಲು ಜೊಲ್ಲು ವಕ್ತ್ರದೊಳು ಬಾಂಧವರೆಲ್ಲರು ಬಿಟ್ಟು ಪೋಗಲು ।
ತರುಣಿಯು ಪುತ್ರರುಂ ಜರೆಯೆ ಮುಪ್ಪಿನ ಕಾಲದೆ ಕಷ್ಟವೆಂತುಟೋ ॥ ೮೬ ॥

ತರುಣಿಯು ಪುಸ್ತಕ ವಿತ್ತಂ ।
ಪರಹಸ್ತದೆ ಸಿಲುಕಿ ತಿರುಗಿ ಬರುವದಶಕ್ಯಂ ॥
ದೊರಕಿಸೆ ಯತ್ನದೆ ಭ್ರಂಸಿಸಿ ।
ಬರುವವು ಜೀರ್ಣತ್ವವನ್ನು ನಷ್ಟವಪೊಂದಲ್ ॥ ೮೭ ॥

ಕರಿದಾದ ವದನವಿರೆ ವಾ ।
ನರನಲ್ಲಂ ಯುಗ್ಮರಸನಗಳಿರಹಿಯಲ್ಲಂ ॥
ನಿರುತದಿ ನಾನಿಹೆನ್ನೆವರ ।
ಕರದೊಳು ಪಾಂಚಾಲಿಯಲ್ಲವೆಂದಡೆ ನಾನಾರ್ ॥ ೮೮ ॥

ಉರೆ ನಿಪುಣನೆನ್ನರಮಣಂ ।
ಬರೆದುದವಾಚಿಸರು ಪರರು ನಿನ್ನಯ ಪತಿಯಂ ॥
ಪರಿಭವಿಪನೆನ್ನನಾಥಂ ।
ಬರೆದುದ ತಾ ವಾಚಿಸಲ್ಕೆ ಬಾರದು ತನಗಂ ॥ ೮೯ ||

ಹರಿಯಂ ಹುಲಿಯನ್ನಲ್ಲದೆ ।
ದ್ವಿರದವ ಗಂಡಕವ ಶರಭವಲ್ಲದೆ ಹಯಮಂ ॥
ಧರೆಯೊಳು ನಿರ್ಬಲವಾಗಿಹ ।
ಕುರಿಗಳ ಬಲಗೀಯುತಿಹರು ಬಲಯುತಮನುಜರ್ ॥ ೯೦ ॥

ಸುರರಿಹ ಲೋಕದೊಳಾಡು ।
ತ್ತಿರುವರು ನರರೀರ್ಶ್ವರಿಂತು ಸಂತಸದಿಂದಂ ॥
ದೊರೆಯು ಕ್ಷಮೆಯಿಂದೆ ಯುಕ್ತಂ ।
ಪರರಿಗೆ ದಾನವನು ಕೊಡುತಲಿರ್ಪದರಿದ್ರಂ ॥ ೯೧ ॥

ನಿಂತಿರೆ ನೀರಂ ಕುಡಿವವ ।
ನಂತೆಯು ನೆರೆದಲ್ಲಿ ಶಾಸ್ತ್ರಮಂ ಪೇಳುತಿಹಂ ॥
ಪಿಂತಣ ಸಿರಿಯಂ ನೆನೆವವ ।
ಪಂತದೆನಖಗಳನು ಕುಡಿಯುತಿರ್ಪವ ಮೂರ್ಖಂ ॥ ೯೨ ॥

ತಮಮಂ ಕಳೆಯುತ ಬರುವೀ ।
ಕಮಲಾಪ್ತನು ನಮ್ಮನೀಗ ಹೊಡೆಯುವನೆಂಬಾ ॥
ಭ್ರಮೆಯಿಂ ಕಾಕಾಎನ್ನುವ ।
ತಿಮಿರೋಪಮವಾಯಸಂಗಳೊದರುವವಲ್ತೇ ॥ ೯೩ ॥

ಮರದಂತಿರುವವು ಫಲಗಳ್ ।
ನಿರುತದಿ ಸುತರಾಗುತಿಹರು ಜನಕನ ತೆರದೊಳ್ ॥
ಗುರುವಿನ ತೆರದೊಳು ಶಿಷ್ಯರ್ ।
ಧರಣೀಪಾಲಕರ ತೆರದಿ ಪ್ರಜರಿದು ಸಾಜಂ ॥ ೯೪ ॥

ಇರುತಿರೆ ನಾಲ್ಕು ಮುಖಂಗಳ್ ।
ಸರೋಜಭವನಲ್ಲ ವೃಷವನೇರಿರ್ದಡೆಯುಂ ॥
ಹರನಲ್ಲ ಪೋಡವಿಲ್ಲದೆ ।
ಭರದಿಂ ಮಳೆಯನ್ನು ಸುರಿಸುತಿರ್ಪನು ನಾನಾರ್ ॥ ೯೫ ॥

**ಉತ್ಪಲ ॥**

ವಿದ್ಯೆಯು ರೂಪ ಮಾನಿಸಗೆ ಗುಪ್ತಧನಂ ಬಹುಭೋಗದಾಗರಂ ।
ವಿದ್ಯೆಯು ತೇಜ ಸದ್ಗುರುವು ಸರ್ವಸುಖಾಗರವಾಪ್ತವರ್ಗವು ॥
ವಿದ್ಯೆಯೆ ಕಾರಣಂ ನರನು ಪೂಜಿತನಾಗುವದಕ್ಕೆ ಲೋಕದೊಳ್ ।
ವಿದ್ಯೆಯದಿಲ್ಲದಿರ್ದವನು ಭೂತಲದೊಳ್ ಪಶುತುಲ್ಯನಾಗಿಹಂ ॥ ೯೬ ॥

ನೊಣವುಂ ಗ್ರಾಮದ ಕೀಟಕ ।
ಗಣಿಕೆಯು ಜೇನ್ನೊಣವು ತಿರಿದುಕೊಂಡುಂಬಂಬ್ರಾ ॥
ಹ್ಮಣರುಂ ಮೂಷಕವುಂ ಮ ।
ತ್ಕುಣವುಂ ಪರರನ್ನು ತಿಂದು ಬಾಳುವರೆಣ್ಬರ್ ॥ ೯೭ ॥

ತುರಗಂ ವೇಗದೆ ಶೋಭಿಪು ।
ದರಿವೆಯು ನಿರ್ಮಲತೆಯಿಂದೆ ಸದನಂ ಸುತರಿಂ ॥
ತೊರೆಯುರಸಂಚೆಗಳಿಂದಂ ।
ಧರೆಯದು ಬೆಳೆಯಿಂದೆ ಸರಸಿ ಕಮಲಗಳಿಂದಂ ॥ ೯೮ ॥

ಚರಿಪೆನು ಪದಹೀನಂ ಸಾ ।
ಕ್ಷರನಾಗಿರ್ದಡೆಯು ನಾನು ಪಂಡಿತನಲ್ಲಂ ॥
ಸರಸದಿ ಮಾತಾಡುವೆನೆನ ।
ಗಿರದರೆ ಮುಖವೆನ್ನಲಾಗಿ ಪೇಳಿರಿ ನಾನಾರ್ ॥ ೯೯ ॥

ವನದೊಳಗುದ್ಭವಿಸಿರ್ಪುದು ।
ವನದೊಳು ಬಿಟ್ಟಿಹರು ಸತತಮಿರ್ಪುದು ವನದೊಳ್ ॥
ಜನರೆನಗಿತ್ತಡೆ ಪಣ್ಯವ ।
ನನವರತಂ ವೇಶ್ಯೆಯಲ್ಲವೆಂದಡೆ ನಾನಾರ್ ॥ ೧೦೦ ॥



## ೩ನೇ ಭಾಗ

## ಒಗಟುಗಳು



ಧರಣಿಯೊಳಿರುತಿಹ ಸಾರಥಿ ।
ಗಿರಿಯಗ್ರದೆ ರಥವು ಪೋಗುತಿರ್ಪುದು ಸಹಜಂ ॥
ಚರಣವದೊಂದಿರ್ದಡೆಯುಂ ।
ಭರದಿಂ ಚಲಿಸುವುದು ಪವನದಂತಿರಲೇನ್ನೈ ॥ ೧೦೧ ॥

ಇರುವದು ಫಲಾಗ್ರದೆ ಮರಂ ।
ಮರದುದಿಯೊಳ್ ಫಲಗಳನ್ನು ಕಾಣ್ಬುದು ನಾಜಂ ॥
ನಿರುತದಿ ಮೊದಲೊಳ್ಕಡೆಯೊಳ್ ।
ಮೆರೆಯಲಕಾರಂ ಸಕಾರವೆನ್ನಲದೇನ್ನೈ ॥ ೧೦೨ ॥

ಬಿರಿನುಡಿಗಳಾಡೆ ಪರರಿಗೆ ।
ತುರಿಪದಿ ಬಿರಿನುಡಿಗಳಿಂದೆ ಮಾತಾಡಿಸುವರ್ ॥
ಸರಸಾದ ವಚನವಾಡಲು ।
ಹರುಷದಿ ಮಾತಾಡುತಿಹರು ಗಚ್ಚಿನ ಗುಡಿವೋಲ್ ॥ ೧೦೩ ॥

ಉರಗದ ನಾಮಂ ನನ್ನದು ।
ನಿರುತದಿ ದುಷ್ಕರ್ಮಗಳಲಿ ತೊಡಗಿರುತಿಹೆನಾ ॥
ನಿರೆಮೊದಲಲ್ಲಿಭಕಾರಂ ।
ವರವರ್ಣ ಕವರ್ಗ ಮಧ್ಯವಂತ್ಯದೊಳಾನಾರ್ ॥ ೧೦೪ ॥

ಮೀರಿದ ಸಿರಿಯಿಂ ಮೆರೆವಳು ।
ತಾರುಣ್ಯವು ವೇಶ್ಯೆಗಿರಲು ಪ್ರಾಯವು ಪೋಗಲ್ ॥
ಧಾರುಣಿಯೊಳು ತಿರಿದುಂಬಳು ।
ದಾರಿಯು ಮುಪ್ಪಾಗಿ ಹಳ್ಳವಾಗುವ ತೆರದೊಳ್ ॥ ೧೦೫ ॥

ನಿರುತಂ ಧರ್ಮವ ಬಿಡರೀ ।
ಧರೆಯೊಳು ಸುಜನರ್ಗೆಕಷ್ಟವೊದಗಿರ್ದಡೆಯುಂ ॥
ಹರಿ ಹಸಿವೆಯಿಂದೆ ಬಳಲ್ದಡೆ ।
ಚರಿಸುತೆ ಪುಲ್ಲನ್ನು ತಿನ್ನ ಬಯಸುವದಿಲ್ಲಂ ॥ ೧೦೬ ॥

ಸುರವ ಭಗೇಂದ್ರನಾಗಿಹನು ದೋಷವದಿರ್ಪುದು ವಾರ್ಧಿಜಾತಗೆ ।
ಸರಸಿಜಮಿತ್ರಗಿರ್ಪುದು ಶರೀರದೆಕುಷ್ಠವು ಪ್ರೇತದಸ್ಥಿಯುಂ ॥
ಧರಿಸಿಹ ಶೂಲಿ ಕೃಷ್ಣನಿಗೆಬಂದಿತು ಕದ್ದಪವಾದ ರತ್ನಮುಂ ।
ನಿರುತದಿ ನಾರದಂ ಜಗಳಹಚ್ಚುವ ದೋಷವದಿಲ್ಲದಿರ್ಪರಾರ್ ॥ ೧೦೭ ॥

ಗೋರಸವಿಲ್ಲದ ಭೋಜನ ।
ಗೋರಸವಿಲ್ಲದ ನೃಪಾಲನೆಸೆಯುವದಿಲ್ಲಂ ॥
ಗೋರಸವಿಲ್ಲದ ನಾರಿಯು ।
ಗೋರಸವಿರದಿರ್ದ ವಿಭವವೆಸೆಯುವದಿಲ್ಲಂ ॥ ೧೦೮ ॥

**ಚಂಪಕ ॥**

ಅರಿಜನರಲ್ಲಿ ಶೌರ್ಯವನು ಭೂಧವನೊಳ್ನಯವನ್ನು ಪ್ರೀತಿಯುಂ ।
ಪರರೊಳು ಶಾಠ್ಯಮುಂ ದುರುಳರೊಳ್ಬುಧರಲ್ಲಿ ವಿನೀತ ಭಾವಮುಂ ॥
ಕರುಣೆಯನಂಗಹೀನರೊಳು ಬಂಧುಗಳೊಳ್ ಸರಲಸ್ವಭಾವಮುಂ ।
ತರುಣಿಯರಲ್ಲಿ ಧೂರ್ತತೆಯ ತೋರಿಸುತಿರ್ಪನು ವಂದ್ಯನಾಗುವಂ ॥ ೧೦೯ ॥

ಪರನಾರಿಯಳನೀಕ್ಷಿಸೆ ।
ಬರುವದು ಬಹುಪುಣ್ಯಪೋಗುವದು ಸ್ಪರ್ಶನದಿಂ ॥
ದುರಿತವು ಚುಂಬನದಿಂದಂ ।
ದೊರೆವುದು ಸ್ವಃಪದವು ಭೋಗದಿಂದಂ ಮೋಕ್ಷಂ ॥ ೧೧೦ ॥

ಜಿಡಧಿಜನಾಹ್ಲಾದವನಿ ।
ತ್ತ್ರಡೆಯುಂ ಕಿರಣಂಗಳಿಂದೆ ವಿರಹಾನಲದೊಳ್ ॥
ಸುಡುತಿಹ ಕಾಮುಕವೃಂದಕೆ ।
ಕಡುತರ ಸಂತಾಪವೀವುದಚ್ಚರಿಯಲ್ತೇ ॥ ೧೧೧ ॥

ಚಂಪಕ ॥

ಜನನವ ಪೊಂದಿದರ್ಭಕಶನೈಶ್ವರನೀಕ್ಷಿಸೆ ವಕ್ರದೃಷ್ಟಿಯಿಂ ।
ಜನಕನಿಗಾದುದಾಕ್ಷಣದೆ ಕುಷ್ಠವು ದೇಹದ ಸರ್ವಭಾಗದೊಳ್ ॥
ವನರುಹಮಿತ್ರಸಾರಥಿಯ ಕಾಲ್ಗಳು ಪೋಗಲು ಖಂಜನಾದಪಂ ।
ಶನಿ ಬಳೆಯಲ್ಕೆ ತಾಪವೆನಿತೀವನೊ ಮರ್ತ್ಯರಿಗೀಧರಿತ್ರಿಯೊಳ್ ॥ ೧೧೨ ॥

ಚಂಪಕ ॥

ತುರಗವು ವೇಗದಿಂ ಪಡೆವುತಿರ್ಪುದು ಶೋಭೆಯ ದಾನದಿಂ ಗಜಂ ।
ಧರಣಿ ನೃಪಾಲನಿಂ ವಿಬುಧರಿಂ ಸಭೆಯುತ್ಸವದಿಂದೆ ಮಂದಿರಂ ॥
ಸರಸಿರುಹಂಗಳಿಂ ಕೊಳವು ಲೋಕವು ಮಾಧವನಿಂದೆ ಭಾಷೆ ವ್ಯಾ ।
ಕರಣದೆ ಪುತ್ರರಿಂಕುಲವು ವಾರಿಧಿಸಂಭವನಿಂದೆ ರಾತ್ರಿಯು ॥ ೧೧೩ ॥

ನಾಂ ತೋಯಜಸಖನೇತ್ರ ಶು ।
ರಾಂತಕಸುತನನ್ನು ಭಜಿಸೆ ವಿಘ್ನಂಗಳ ನೀ ॥
ಯಂ ತುಕಿಸಲು ಗಿರಿಜಾರಮ ।
ಣಂ ತುರಿಪದಿ ಸುಖವನೀವ ದಯೆಯಿಂದೀಗಳ್ ॥ ೧೧೪ ॥

ಇರುವನೆ ದೇವನು ಕಲ್ಲನೊ ।
ಳಿರುವನೆ ಕಾಷ್ಠದಲಿ ಮಳಲಿನೊಳಗಿರುತಿಹನೇ ॥
ನಿರುತದಿ ಭಾವನೆಯೊಳಗಿಹ ।
ಪರಮಾತ್ಮನ ದಯೆಯ ಪಡೆಯೆ ಭಾವನೆ ಮುಖ್ಯಂ ॥ ೧೧೫ ॥

ಗಳಿಸಲು ಕಷ್ಟಂ ವಿತ್ತವ ।
ನುಳಿಸಿದ ದ್ರವ್ಯವನು ಕಾಯ್ದುಕೊಳ್ವುದು ಕಷ್ಟಂ ॥
ಕಳವಾಗಿ ಪೋಗೆ ಕಷ್ಟವ ।
ದಿಳೆಯೊಳು ಧಿಕ್ಕಾರಕಷ್ಟಮಿಶ್ರಿತಧನವುಂ ॥ ೧೧೬ ॥

ಧನದಾಶೆಯಿಂದೆ ಜಗಳಗ ।
ಳನವರತಂ ಜರಗುಗುತಿರ್ಪುವೀ ಮಾನಿಸರೊಳ್ ॥
ಮನುಜರ ಕೊಲ್ಲುತಿರ್ಪರ್ ।
ಧನಮಂ ಬಯಸುವದೆ ತಾಪಕಾರಣಮಲ್ತೇ ॥ ೧೧೭ ॥

ಮಾರಪಿತನಾರು ತಿಸುಳಿಗ ।
ದಾರನ್ನು ಹಿಮಾಗನಿತ್ತ ಬೊಜಗಂ ಸುಸಿಲೊಳ್ ॥
ನಾರಿಯ ಮುಖವೇಗೆಯ್ವಂ ।
**ನಾರಾಯಣ**ನಗಜೆಯನ್ನು ಚುಂಬಿಸುತಿರ್ಪಂ ॥ ೧೧೮ ॥

ನರರಿಗೆ ದುರ್ಲಭನವ್ಮೃತವು ।
ಸುರರಿಗೆ ದುರ್ಲಭವು ನೀರು ಸ್ವರ್ಗಾಂತರದೊಳ್ ॥
ನಿರುತಂ ಪಿತೃಗಳಿಗೆ ಸುತಂ ।
ಸುರಪತಿಶಕ್ರನಿಗೆ ತಕ್ರವತಿದುರ್ಲಭವೈ ॥ ೧೧೯ ॥

ಖದರೋಹಣ ಲೇಸಲ್ಲಂ ।
ಹರಿಪಾದಾಹತವೆ ಲೇಸು ಧರಣೀ ತಳದೊಳ್ ॥
ದುರುಳನ ಮೈತ್ರಿಯಯುಕ್ತಂ ।
ಪರಹಿತಮು ಗೆಯ್ವ ಸುಜನಮತ್ಸರಯುಕ್ತಂ ॥ ೧೨೦ ॥

ದುರುಳಗಾಡಡೆಯುಂ ಸ ।
ತ್ಪುರುಷರು ಹಿತದಿಂದೆ ದಯೆಯ ಗೆಯ್ಯುತ್ತಿರ್ಪರ್ ॥
ಶರನಿಧಿಜಾತಂ ತನ್ನಯ ।
ಕಿರಣಗಳಿಂ ಬೆಳಗುತಿರ್ಪ ನೀಚರ ಗೃಹಮಂ ॥ ೧೨೧ ॥

**ಚಂಪಕ** ॥
ಜಡಜಜನೇತರಿಂ ಜಗದೆ ಕಾರ್ಯವ ಗೆಯ್ವ ಕುಲಾಲನಂತೆವೋಲ್ ।
ಪಿಡಿದು ಕಪಾಲಮಂ ಕರದೆ ಭಿಕ್ಷೆಯ ಬೇಡುವನೇತರಿಂ ಶಿವಂ ॥
ಪಡೆದನದೇತರಿಂದೆ ದಶಜನ್ಮಗಳಂ ಹರಿ ಸೂರ್ಯನೇತರಿಂ ।
ನಡೆವನದನ್ನು ದೈವವನು ಕುಂಬಿಡುತಿರ್ಪೆನತೀವ ಭಕ್ತಿಯಿಂ ॥ ೧೨೨ ॥

ಜನನಿಯು ಮರಣವ ಪೊಂದಿರ ।
ಲನವರತಂ ಬೊಗಳ್ವಸತಿಯು ಮನೆಯೊಳಗಿರ್ಪಾ ॥
ಮನುಜಗೆ ವನನದು ಬೇಡಾ ।
ಮನೆಯೇ ವನದಂತೆ ಬಾಸವಾಗುತ್ತಿರ್ಕುಂ ॥ ೧೨೩ ॥

ಗೌರೀಸುತ ಭಜಿಪಂ ಮಾ ।
ರ್ಜಾಲರವ ತಿನಲಾಗದೆಂದು ತನ್ನ ಸುರಥವಮಂ ॥
ಕಾರಣದಿಂದೆ ಮಹಾತ್ಮರ್ ।
ಧಾರುಣಿಯೊಳು ನೀಚರನ್ನು ಸೇವಿಸುತಿರ್ಪರ್ ॥ ೧೨೪ ॥

ಜನನಿಯು ಜನಕಂ ಜಾಹ್ನವಿ ।
ಜನುಮದ ಭೂಮಿಯು ಜನಾರ್ದನ ಪದಾಂಭೋಜಂ ॥
ಮನುಜಗೆ ದುರ್ಲಭವಾಗಿಹ ।
ವನವರತಂ ಶರಜಕಾರಗಳು ಭೂತಳದೊಳ್ ॥ ೧೨೫ ॥

ಉರಗದ ದುರುಳನ ತೂಗಲ್ ।
ದುರುಳಂ ಬಹುಭಾರವಾಗಿ ತೋರುತ್ತಿರ್ಪಂ ॥
ಧರೆಯೊಳು ಕಿರುವದು (ಮಂತ್ರವು) ಪನ್ನಗ ।
ದಿರುವನು ವಿಷವನ್ನು ತೆಗೆಯೆ ದುರುಳಂಗಿಲ್ಲಂ ॥ ೧೨೬ ॥

ದುರುಳಂ ದೋಷವ ಗೆಯ್ಯು ।
ತ್ತಿರುವನು ಸೂಕರವು ಮಲವ ತಿನ್ನುವವೋಲ್ ಸ ॥
ತ್ಪುರುಷರು ಗುಣಮಂ ಗ್ರಹಿಸು ।
ವರರಸಂಚೆಯು ನೀರೊಳಿರ್ಪ ಪಾಲೀಂಟುವವೋಲ್ ॥ ೧೨೭ ॥

ಪರರಿಗೆ ಹಿತವನ್ನಾಡುವ ।
ದುರುಳನೊಳಿಡೆ ನಂಬುಗೆಯನು ಲೇಸಲ್ಲಂ ತುಂ ॥
ಬಿರುವದು ಬಾಯಿಯು ಮಧುವಿಂ ।
ಭರಿತಂ ಹೃದಯವದು ಕಾಲಕೂಟದ ವಿಷದಿಂ ॥ ೧೨೮ ॥

ದುರುಳಂ ಗಳಿಸಿದ ವಿತ್ತವ ।
ದರಗೆಯ್ಯೋಗಮಿಲ್ಲ ಬಂಧುವರ್ಗಕ್ಕಿಲ್ಲಂ ॥
ಪರರಿಗೆ ಕೊಡವುದಕಿಲ್ಲಂ ।
ನರಪಗೆ ಕಳ್ಳಂಗೆ ಭೋಗಿಸಲ್ ಧನಮಿರ್ಕುಂ ॥ ೧೨೯ ॥

**ಉತ್ಪಲ ॥**

ಚೋರನು ನಿಂದಿಸುತ್ತಿರುವ ಚಂದ್ರನ ಮೂರ್ಖನು ಬುದ್ಧಿವಂತರಂ ।
ಶೂರನ ಹೇಡಿ ಭಿಕ್ಷೆಯನು ಬೇಡುವನೈಸಿರಿಯಿಂದೆ ಯುಕ್ತನಂ ॥
ವಾರಿಜಮಿತ್ರನಂ ಕುರುಡ ಶುದ್ಧಕುಲೋದ್ಭವನನ್ನು ಹೀನನು ।
ನಾರಿಯರನ್ನು ಷಂಢನು ಕುರೂಪಿಯು ಮನ್ಮಥರೂಪವಂತನಂ ॥ ೧೩೦ ॥

ಗಿಳಿಗಳು ಮೆರೆಯದನಂದನ ।
ವಳಿಗಳು ತನಿಗಂಪನೀಂಟದಿರ್ದಂಬುಜಗಳ್ ॥
ಬೆಳೆಬಾರದಿರ್ದ ಹೊಲವುಂ ।
ತುಳಸಿಯದಿಲ್ಲದನ ಹರಿಯ ಪೂಜೆ ನಿರರ್ಥಂ ॥ ೧೩೧ ॥

ಜಲಜಾಪ್ತನುದಯ ಪೊಂದುವ ।
ಫಲಗಳನೀವವು ಮರಂಗಳೆಲ್ಲ ದಿಟವಿರುವದರಿಂ ॥
ಸಲಿಲವ ನೀವವು ನದಿಗಳ್ ।
ಮಲಯಾಚಲದಿಂದೆ ಬೀಸುತಿರ್ಪುದು ಪವನಂ ॥ ೧೩೨ ॥

ಮದನಂ ಮಾನಿನಿ ಮತ್ಸ್ಯಂ ।
ಮಧುಪಂ ಮಾರಮಣಿ ಮನವು ಮರ್ಕಟ ಮೇಘಂ ॥
ಮದವುಂ ಮಾರತವುಂ ನಿರು ।
ತದೊಳಿರುವವು ದಶಮಕಾರಗಳು ಚಂಚಲವೈ ॥ ೧೩೩ ॥

ಕರಿವಶವಾಗುವದಂಕುಶ ।
ವಿರುತಿರೆ ಕರದಲ್ಲಿ ಶೃಂಗಿ ಲಗುಡವು ಕಸೆಗೋ ॥
ಲಿರುತಿರೆ ಕರದೊಳ್ವಾಜಿಯು ।
ದುರುಳರು ವಶರಾಗುತಿರ್ಪರಸಿಯಿರೆ ಕರದೊಳ್ ॥ ೧೩೪ ॥

ಗಿರಿಗಳಿಗೆ ವಜ್ರದಿಂದಂ ।
ಧರಣೀರುಹಗಳ್ಗೆ ಭಯವು ಪಾವಕಸಖನಿಂ ॥
ದುರುಭಯವು ದುರ್ಜನರಿಂದಂ ।
ನಿರುತಂ ಸುಜನರ್ಗೆ ಕಮಲಗಳಿಗತಿ ಚಳಿಯಿಂ ॥ ೧೩೫ ॥

ಅನಿಲದೆ ತಾಪವ ನಿತ್ತಡೆ ।
ಘನತರ ಮುದ್ಗರದೆ ಹೊಡೆಯೆ ಖೇದವದಿಲ್ಲಂ ॥
ಮನದೊಳು ದುಃಖಿಸುತಿಹೆನೆನ ।
ಗನುಪಮ ಗುಂಜಿಯನು ಹಚ್ಚಿ ಸರಿಮಾಳ್ಪುದರಿಂ ॥ ೧೩೬ ।

ಅರಸುತನಂ ಪಾಂಡಿತ್ಯಂ ।
ಸರಿಯಾಗಲಶಕ್ಯವಾದಮಾತಿದು ಧರೆಯೊಳ್ ॥
ನರಪಂ ಪೂಜ್ಯಂ ತನ್ನಯ ।
ಧರೆಯೊಳು ಪಂಡಿತನು ಪೂಜ್ಯಸರ್ವತ್ರದೊಳಂ ॥ ೧೩೭ ॥



# ೪ನೇ ಭಾಗ

## ವಿಶೇಷ ಭಾವಗಳು

ಕರಿದಾಗಿರುವದು ದುಂಡಗೆ ।
ನಿರುತದಿ ಬ್ರಾಹ್ಮಣರು ಪೂಜೆಯಂ ಗೆಯ್ಯುವರ ॥
ಕ್ಕರವಿರೆ ಮೊದಲೆ ಶಕಾರವ ।
ದಿರು ತಿರೆ ಕಡುಯೊಳ್ಮಕಾರ ವೆನ್ನಲದೇನೈ ॥ ೧೩೮ ॥

ವಿಷದುರಧೀತಗೆ ವಿದ್ಯೆಯು ।
ವಿಷವದು ಭೋಜನವಜೀರ್ಣವಾಗಿರುವಾಗಳ್ ॥
ವಿಷವಂತೆ ಮಾತು ಬಡವಗೆ ।
ವಿಷವುಂ ಜರಠಂಗೆ ಪ್ರಾಯವಿರುವಂಗನೆಯರ್ ॥ ೧೩೯ ॥

ಚೋರಂಗೆ ಧರ್ಮವಿಲ್ಲಂ ।
ವಾರಾಂಗನೆಯರಿಗೆ ನೇಹವೆನ್ನುವದಿಲ್ಲಂ ॥
ಕ್ರೂರಂಗೆ ಕ್ಷಮೆಯುದಿಲ್ಲಂ ।
ಧಾರುಣಿಯೊಳು ಕಾಮುಕರ್ಗೆ ಸತ್ಯವದಿಲ್ಲಂ ॥ ೧೪೦ ॥

ಸುತರಿಂ ಸೇವಕರಿಂದಂ ।
ಹಿತರಿಂ ಕನ್ನಿಕೆಯರಿಂದೆ ಕೂಡಿರ್ದಡೆಯುಂ ॥
ಸತಿಹೀನನಾದ ನರನಿಗೆ ।
ಸತತಂ ಗೃಹಶೂನ್ಯವಾಗಿ ತೋರುವದಲ್ತೇ ॥ ೧೪೧ ॥

ತಿಳುವಳಿಕೆಯಿಲ್ಲದಿರ್ದವ ।
ಗಳಹುತಲಿಹ ಗರ್ವವನ್ನುತಾಳರು ವಿಬುಧರ್ ॥
ಜಲವರ್ಧವಿರಲು ಬಹು ಸ ।
ಪ್ಪಳವುಂ ಮಾಡುವದು ಘಟವು ಮಾಡದು ಭರಿತಂ ॥ ೧೪೨ ॥

ಮೊದಲೊಳ್ವಂದಿಪೆ ದುರುಳರ ।
ತದನಂತರದಲ್ಲಿ ಸುಜನರಂ ವಂದಿಸುವೆಂ ।
ಗುಧಶುದ್ಧಿಯನ್ನುಗೆಯ್ವರ್
ವದನವನಂತರದೆ ತೊಳೆದುಕೊಳ್ವರು ಸಕಲರ್ ॥ ೧೪೩ ॥

ತುಂಬಿರಲು ಕೆರೆಯು ನೀರಿಂ ।
ಕುಂಭದೊಳಿರುತಿರ್ಪ ನೀರ ಕುಡಿವುದು ಕಾಕಂ ॥
ರಂಭೋಪಮ ಸತಿಯಿರುತಿರೆ ।
ಹಂಬಲಿಸುವರನ್ಯಸತಿಯ ಭೋಗಕೆ ದುರುಳರ್ ॥ ೧೪೪ ॥

ಸರಳತ್ವವು ಬರಲಾರದು ।
ನಿರುತದಿ ಶುನಪುಚ್ಛವನ್ನು ನಲಿಕೆಯೊಳಿರಿಸ ॥
ಲ್ಕುರಿ ಬೋಧಿಸಿದಡೆಯುಂ ।
ದುರುಳರು ಕಾಪಟ್ಯವನ್ನು ಬಿಡುವದಶಕ್ಯಂ ॥ ೧೪೫ ॥

ಭರದಿಂ ಕೇಶವ ಬೀಳಲ್ ।
ಪರಮಾನಂದವನು ದ್ರೋಣ ತಾಳ್ವದಕಂಡೆಂ ॥
ಮರುಗುತೆ ಕೌರವ ರೋದಿಸು ।
ತಿರುವುದನೀಕ್ಷಿಪುದು ಜಗದೆ ಚಿತ್ರವಿದಲ್ತೇ ॥ ೧೪೬ ॥

ವನಜವ ಪೋಲ್ವುದು ಮುಖ ಚಂ ।
ದನಶೀತಲವನ್ನು ಪೋಲ್ವುವಾವಚನಂಗಳ್ ॥
ಮನದೊಳಗಿರ್ಪುದು ಕೋಪವ ।
ದನಲದವೋಲ್ ಕುಜನಗಿಹವು ಮೂಲಚ್ಚಣಗಳ್ ॥ ೧೪೭ ॥

ಪರದಾರನಿರೀಕ್ಷಣೆಯೊಳ್ ।
ಕುರುಡಂ ಪರನಿಂದೆಯಲ್ಲಿ ಮೂಕಂ ಕುಂಟಂ ॥
ಪರಧನಹರಣದೆ ತಾನಾ ।
ಗಿರುತಿಹ ಮಾನಿಸನೆ ವಂದ್ಯನಿರ್ಪಂ ಧರೆಯೊಳ್ ॥ ೧೪೮ ॥

ಪರರಿಗೆ ಹಿತಮಂಗೆಯ್ಯು ।
ತ್ತಿರುವರು ಸಜ್ಜನರು ಕಷ್ಟದಲ್ಲಿರ್ದಡೆಯುಂ ॥
ಶರಧಿಸುತಂ ಜೌಳನ ವೋಗ ।
ದಿರಲೆಂ ಪುಣ್ಯವನು ಕೊಡ ತಲೆವರ್ಗಂ ಧರೆಯೊಳ್ ॥ ೧೪೯ ॥

ನರಪಂ ಸಚಿವವಿಹೀನಂ ।
ತರುವು ನದೀಕೂಲದೆಡೆಯೊಳಿರ್ದಡೆ ನಷ್ಟಂ ॥
ತರುಣಿ ನಿರಂಕುಶಳಿರ್ದಡೆ ।
ಪರರಲಿ ವಿಶ್ವಾಸವಿಲ್ಲದಿರ್ದಾಮನುಜಂ ॥ ೧೫೦ ॥

ನೀರಂ ಕುಡಿವವೆ ನದಿಗಳ್ ।
ಭೂರುಹಗಳು ಭಕ್ಷಿಸುವವೆ ಫಲಮಂ ಗೋಗಳ್ ॥
ಕ್ಷೀರವ ಕುಡಿವವೆ ಪರರುಪ ।
ಕಾರಕ್ಕಂ ಸಾಧುಜನರಿಗಿರುತಿಹ ವಿಭವಂ ॥ ೧೫೧ ॥

**ಉತ್ಪಲ ॥**

ಮೇರುವು ತನ್ನ ಸ್ಥಾನವನು ಬಿಟ್ಟಡೆಯುಂ ರವಿ ತಣ್ಣಗಾದಡಂ ।
ವಾರಿಜವದ್ರಿಶೃಂಗದೊಳು ಪುಟ್ಟಿದಡಂ ಶಶಿಯುಷ್ಣಪತ್ರತಂ ॥
ವಾರಣವೈರಿಯುಂ ನರಿಯು ತಿಂದಡೆಯುಂ ಮರದಗ್ರಭಾಗದೊಳ್ ।
ತಾರಗೆ ಯಾಳಿಪುಟ್ಟಿದಡೆಯುಂ ಮೃಷೆಯಂ ಬಿಡಲಾರ ದುರ್ಜನಂ ॥ ೧೫೨ ॥

**ಚಂಪಕ ॥**

ಧರಿಸಿಹ ಕಾಲಕೂಟವನು ಕಂಠದೊಳಿಂದಿಗು ಪಾರ್ವತೀಧವಂ ।
ಧರಣಿಯ ಸರ್ವಭಾರವನು ಬೆನ್ನೊಳು ಪೊತ್ತಿಹ ಕೂರ್ಮ ನಿಂದಿಗುಂ ॥
ಶರನಿಧಿಯಿಂದಿಗುಂ ಬಡಬಕಿಚ್ಚನು ಹೊಟ್ಟೆಯೊಳಿಟ್ಟುಕೊಂಡಿಹಂ ।
ನಿರುತದಿ ಭೋಗಿಸುತ್ತಿಹರು ಸಂತರು ಪಾಲಿಗೆಬಂದ ಕಷ್ಟಮಂ ॥ ೧೫೩ ॥

**ಚಂಪಕ ॥**

ದಹನಕೆ ವಾರಿಯಂಕುಶವು ಮತ್ತಗಜೇಂದ್ರಕೆ ದಿವ್ಯಭೇಷಜಂ ।
ಘನತರವಾದಘಕ್ಕೆ ಹರಿಪಾದಸರೋರುಹಯುಗ್ಮಸೇವೆಯು ॥
ದಿನಕರತೀವ್ರಸಾತಪಕೆ ಛತ್ರವು ಗೋವಿಗೆ ಕೋಲು ಯಂತ್ರ ಸ ।
ಸರ್ಪದ ವಿಷಕಿರ್ಪುದೌಷಧವು ಮೂರ್ಖನಿಗೌಷಧವಿಲ್ಲ ಧಾತ್ರಿಯೊಳ್ ॥೧೫೪॥

ಉರಿಯುವ ಬೆಂಕಿಯ ನೋಡಲ್ ।
ಪರಮಾಶ್ಚರ್ಯವನು ಪೊಂದುತಿರ್ಪೊಳ್ಳಿನೊಳಾಂ ॥
ಪರರಿಗೆ ಕೊಟ್ಟಿಲ್ಲಗದವ ।
ಕರಲಾಘವದಾಟಪೆಂದುಸುಡಿದಂ ವೈದ್ಯಂ ॥ ೧೫೫ ॥

**ಚಂಪಕ ॥**

ಜನರಿಗೆ ತನ್ನ ಸಚ್ಚರಿತೆಯಿಂ ಸಲೆತೋಷವನೀವನೇ ಸುತಂ ।
ಘನಹಿತಮಂ ಮನೋಹರನೊಳಿಚ್ಛಿಸುತಿರ್ಪಳೆ ಯೋಗ್ಯ ಪತ್ನಿಯು ॥
ಮನೆಯೊಳರಣ್ಯದಲ್ಲಿ ಸುಖದುಃಖಗಳಲ್ಲಿ ಸಮಸ್ಥಿತಂ ಸಖಂ ।
ಮನುಜಗೆ ಪುಣ್ಯದಿಂದೆ ದೊರೆಕೊಳ್ವರು ಮೂವರಿವರ್
ಧರಿತ್ರಿಯೊಳ್ ॥ ೧೫೬ ॥

ಪರನಿಂದೆಯನ್ನು ಗೆಯ್ಯದೆ ।
ದುರುಳಂ ಸಂತುಷ್ಟಿಯನ್ನು ಪೊಂದನು ಕಾಕಂ ॥
ಸರಸಾದ ಪದಾರ್ಥಂಗಳ ।
ನಿರುತದಿ ತಿಂದಂತ್ಯದಲ್ಲಿ ತಿಂಬುದು ಮಲಮಂ ॥ ೧೫೭ ॥

ಮಾರಮಣಿ ಬರುವಕಾಲದೆ ।
ನಾರೀಕೇಳಗಳೊಳಿರ್ಪ ಜಲದೊಲ್ ಬರ್ಪಳ್ ॥
ಸಾರುವಕಾಲದೆ ಪೋಪಳು ।
ವಾರಣ ತಿಂದಿಹ ಕಪಿತ್ಥ ಫಲಗಳ ತೆರದೊಳ್ ॥ ೧೫೮ ॥



## ೫ನೇ ಭಾಗ

## ವಿಶೇಷಭಾವ



ತೋರುವದತಿ ಚಿತ್ರಂ ಧೇ ।
ನೂರಗಗಳ ತೆರದಿದಾಸ ಪಾತ್ರಾಪಾತ್ರಂ ॥
ಕ್ಷೀರಂ ಬರ್ಪುದು ವಿಷದಿಂ ।
ಘೋರವಿಷಂ ಪುಟ್ಟುತಿರ್ಪುದಾ ಪಾಲಿಂದಂ ॥ ೧೫೯ ॥

ಸತತಂ ಪೂಜಾಪೇಕ್ಷಿತ ।
ನತಿವಕ್ರಂ ಕ್ರೂರ ನಿರುತ ಕನ್ಯಾರಾಶಿ ॥
ಸೀತನಾಗಿಹ ಜಾಮಾತಂ ।
ಕ್ಷಿತಿಯೊಳು ಪತ್ತನೆಯ ಗ್ರಹದವೋಲಿರುತಿರ್ಪಂ ॥ ೧೬೦ ॥

ಕರುಣೆಯೊಳಾಳ್ವನ ವಕ್ಷದೆ ।
ಧರಿಸಿಹ ಪತಿಯನ್ನುಬಿಟ್ಟು ಕೋಪದೆ ಕೊಲ್ಲಾ ॥
ಪುರಮಂ ತೆರಳಿದ ಲಕುಮಿಯು ।
ನರರಂ ತ್ಯಜಿಸುವದಿದೇನು ಚಿತ್ರಮೆ ಧರೆಯೊಳ್ ॥ ೧೬೧ ॥

ಮಾರುಮಣಿಯಿರ್ಪ ತಾಣದೆ ।
ಸಾರಸ ಸಂಭವನ ರಾಣಿಯಿರುವದಶಕ್ಯಂ ॥
ಧಾರುಣಿಯೊಳಗನುರಾಗವು ।
ತೋರುವದೇ ಕೂಡಿರಲ್ಕೆ ಶ್ವಶ್ರೂಸ್ನುಷೆಯರ್ ॥ ೧೬೨ ॥

ಚಂಪಕ ||

ಧರೆಯೊಳು ಮಾನವಂ ಹಸಿವೆಯಿಂದತಿಕಷ್ಟವ ಪೊಂದಲೇನು ವ್ಯಾ ।
ಕರಣವತಿಂಬನೇ ತೃಷೆಯ ತಾಪದ ಶಾಂತಿಯ ಗೆಯ್ಯಲೇನು ಕಾ ॥
ವ್ಯರಸವ ಪೀರ್ವನೇ ಕುಲವನುದ್ಧರಿಸುತ್ತಿಹುದೇನು ತರ್ಕವೈ ।
ಸಿರಿಯಿರೆ ಸಂಕಟಂಗಳನು ನೀಗಿಸಿಕೊಳ್ಳಲು ಶಕ್ತನಾಗುವಂ ॥ ೧೬೩

ನೋಡವು ಕಣ್ಗಳು ಮಾತ ।
ನ್ನಾಡದು ವಕ್ತ್ರವದು ಕೇಳಲಾರವು ಕಿವಿಗಳ್ ॥
ನೀಡವು ಕೈಗಳು ದಾನವ ।
ನಾಡೊಳಗೆಸಿರಿಯ ರೋಗವಾಗಿಹನರನಾ ॥ ೧೬೪ ॥

ಇದುತಿರ್ಪ ಸಕಲಧನಮಂ ।
ಪೊರೆವುತ್ತಾತ್ಮದಸುಖಕ್ಕೆ ಮಾಡದೆವ್ಯಯವ ॥
ನ್ನೆರೆಯದೆ ಪರರಿಗೆ ಬಾಳುವ ।
ನರನಿರ್ಪನು ಹೊಲವ ಕಾಯ್ವ ಬೆದರಿನ ತೆರದೊಳ್ ॥ ೧೬೫ ॥

ದುರುಳನ ಸಂಸರ್ಗದೆ ಸ ।
ತ್ಪುರುಷರು ಬಹುನೀಚಕಾರ್ಯಗೆಳಸುತ್ತಿರ್ಪರ್ ॥
ಕುರುಪನ ಪ್ರೇರಣೆಯಿಂ ಗೋ ।
ಹರಣಕೆ ಪೋಗಿರ್ದ ತ್ರಿಪಥಾಗಾತನುಜಾತಂ ॥ ೧೬೬ ॥

ಒಣಗಿರುವ ಚರ್ಮದುಸುರಿಂ ।
ಕ್ಷಣದಲಿ ದಹಿಸುತ್ತಲಿಹವು ಲೋಹಂಗಳು ಧಾ ॥
ರುಣಿಯೊಳಗಳಿವುದು ವಂಶವು ।
ಗುಣಯುತ ಸಾಧುಗಳ ತಾಪದುಸುರಿಂದರಿದೇ ॥ ೧೬೭ ॥

ಭೂತಲವು ದಾನದಿಂದಂ ।
ಭೂತಪ್ರಾಣವದು ದಂತಿ ಹೇಮವು ವಿಭವಂ ॥
ಗೋಕುರಗಾಳಿಯು ದೊರೆವುದು ।
ಸ್ವಾತಂತ್ರ್ಯವು ದಾನದಿಂದೆ ದೊರಕುತ್ತಿಹುದೇ ॥ ೧೬೮ ॥

ಬಲುವಿದ್ಯಾಯುತನಾಗಿಹ ಸ ।
ತ್ಕುಲಜಗೆ ಮಾನವನು ಕೊಡರು ಧನಿಕರ್ಗೀವರ್ ॥
ತಲೆಯೊಳು ಗಂಗೆಯನೀಶ್ವರ ।
ನೊಲವಿಂ ಧರಿಸಿರ್ದಡೇನು ವಾರ್ಧಿಗೆ ಪೋಪಳ್ ॥ ೧೬೯ ॥

ಉರೆಸುಖವಿರ್ಪಗೆ ಕಷ್ಟಂ ।
ಬರೆದೇವನ ಭಜಿಸುತಿರ್ಪನದುಕಾರಣದಿಂ ॥
ನಿರುತದಿ ಕಷ್ಟದೊಳಿಮ್ಮ ।
ನ್ನಿರಿಸೆನ್ನುತ ದೇವನಲ್ಲಿ ಭಕ್ತರು ಕೇಳ್ವರ್ ॥ ೧೭೦ ॥

ಎಲುವಂ ದಧೀಚಿ ಚರ್ಮವ ।
ಕಲಿಕರ್ಣನು ಮಾಂಸವನ್ನು ಶಿಬಿನರಪಾಲಂ ॥
ಸಲೆ ಕರುಣೆಯಿಂದ ಕೊಟ್ಟಂ ।
ನಲವಿಂ ಬೇಡಿದುದನೆಲ್ಲವೀವರು ಸಂತರ್ ॥ ೧೭೧ ॥

ಚಂಪಕ ॥

ಧರೆಯೊಳಗತ್ರಿಕಾಂತೆಯನುಸೂಯೆಯ ಗೆಯ್ಮಲು ಧರ್ಮಭ್ರಷ್ಟಳಂ ।
ಹರಿಹರವಾರಿಜಾಸನರು ಬಂದೆಮಗನ್ನವ ನಗ್ನಳಾಗಿ ನೀ ॥
ತುರಿಪದಿ ನೀಡೆನಲ್ ಪತಿಕಮಂಡಲುತೀರ್ಥವ ಪ್ರೋಕ್ಷಿಸಲ್ಕೆ ತಾ ।
ಳ್ದರು ಶಿಶುರೂಪವನ್ನವರು ಸಾಧ್ವಿಯು ಗೆಯ್ವಳಸಾಧ್ಯ ಕೃತ್ಯಮಂ ॥ ೧೭೨ ॥

ಸರಿಯಲ್ಲ ವಿಷಕೆ ವಿಷಮೆಂ ।
ದೊರೆವುದು ಸಾಲವದು ವಿಷವದೆಂಬುದುಯುಕ್ತಂ ॥
ನರನೋರ್ವನನ್ನೆ ವಿಷಸಂ ।
ಹರಿಸುವದೀಸಾಲ ಪುತ್ರಪೌತ್ರಾದಿಗಳಂ ॥ ೧೭೩ ॥

ಕಷ್ಟವನೀವರು ಪಕ್ಷಿಗೆ ।
ತುಷ್ಟಿಯ ಪಡೆವಂತೆ ವಾರನಾರಿಗೆ ಸುಖಮಂ ॥
ದುಷ್ಟರಿಗತಿಶಯ ಮಾನವ ।
ಶಿಷ್ಟರಿಗಪಮಾನವನ್ನು ಮಾಳ್ಪರು ಕಲಿಯೊಳ್ ॥ ೧೭೪ ॥

ದಾರಿಯ ನಡೆಯುತೆ ತಿಂಬವ ।
ಪೌರುಷಮಂ ತಾನೆ ಹೇಳಿಕೊಳ್ವವ ಮೂರ್ಖಂ ॥
ವಿೂರಿದ ಕಾರ್ಯಕೆ ಮರುಗುವ ।
ಸಾರುವನೀರ್ವರೊಳು ಮಾತುನಡೆದಿರುವಾಗಳ್ ॥ ೧೭೫ ॥

ಜನನಿಯುಮಂ ಜನಕನುಮಂ ।
ತನಯರುಮಂ ಸತಿಯುಮಂ ಸಿರಿಯುಮಂ ಗೃಹಮಂ ॥
ದನಕರುಮಂ ಬಿಟ್ಟಾತ್ಮವು ।
ತನುವಿಂದಗಲುವದು ಪೋಪ್ಪದದರೊಡೆಧರ್ಮಂ ॥ ೧೭೬ ॥

ಹೀರುವದು ನರರ ರಕ್ತವ ।
ಜಾರುವದತಿವೇಗದಿಂದೆ ಕೊಲ್ಲಲು ಪೋಗಲ್ ॥
ನಾರುವದು ಹಿಡಿದು ಕೊಲ್ಲಲ್ ।
ಮೂರಿರುವವು ದುರ್ಗುಣಗಳು ತಗುಣಿಯ ಮೈಯೋಳ್ ॥ ೧೭೭ ॥

ಚಂಪಕ ॥

ತರಣಿಯು ಪುಟ್ಟಿದಂದಪರ ದಿಕ್ಕಿನೊಳಂಬುಧಿ ಬತ್ತಿದಂದು ಕೇ ।
ಸರಿಯನು ಪುಲ್ಲೆ ಸಂಹರಿಸಿದಂದು ನಿವಾಸವ ಮಾಡಿದಂದು ವಾ ॥
ಶ್ಚರಗಳು ವೃಕ್ಷದಗ್ರದಲಿ ಪೂರ್ವವು ಪಶ್ಚಿಮಕೂಡಿದಂದು ತಾ ।
ವರಿಯಲಿ ಚಂದಿರಂ ಜನಿಸಿದಂದಬಲಾಮನವನ್ನು ಕಾಣುವೆಂ ॥ ೧೭೮ ॥

ಸುರಿವುದಕಾಲಕೆ ವೃಷ್ಟಿಯು ।
ಧರಣಿಯು ಕಂಪನವ ಹೊಂದುತಿರ್ಪುದು ದನಗಳ್ ॥
ಧರಣೀರುಹವನ್ನದರ್ಪವು ।
ನಿರುತದಿ ಕಷ್ಟವದು ಧರ್ಮವಂತಗೆ ಕಲಿಯೊಳ್ ॥ ೧೭೯ ॥

ಕುರುಡಗೆ ಕನ್ನಡಿಯಿಂದೇಂ ।
ತರುಣಿಯಳಿಂದೇಂ ನಪುಂಸಕಗೆ ಭೇಕಕೆ ವಾ ॥
ರಿರುಹದ ಸುಗಂಧದಿಂದೇಂ ।
ದುರಿತವ ಗೆಯ್ಯುತ್ತಲಿಹನ ಗೆಳೆತನದಿಂದೇಂ ॥ ೧೮೦ ॥

ಪರರಲಿ ಮೈತ್ರಿಯು ಸ್ವಜನರೊ ।
ಳಿರುವದು ದ್ವೇಷವದು ಬಸಿರುಕಸ್ಕೆಯರಿಗೆ ನೀ ||
ಚರಿಗತಿಶಯ ಸಿರಿಯು ಮಹಾ ।
ತ್ಮರಿಗೆ ದರಿದ್ರತನವು ವಿಪರೀತಂ ಕಲಿಯೊಳ್ ॥ ೧೮೧ ॥

ಪರರಿಗೆ ತಾಪವ ನೀಯುತೆ ।
ನಿರುತದಿ ದುಷ್ಕರ್ಮದಲ್ಲಿ ತೊಡಗಿಹ ಪಾಪಾ ॥
ಚರಣೆಯೊಳಿರುತಿರ್ಪವನಂ ।
ಸಿರಿ ತಾ ಬಹುಕೋಪದಿಂದೆ ತೊಲಗುತ್ತಿರ್ಪಳ್ ॥ ೧೮೨ ॥

ಶಿರದಲ್ಲಿ ಶಿವನು ಗಂಗೆಯ ।
ನುರದಲಿ ಮಾಧವನು ಲಕುಮಿಯಂ ಧರಿಸಿರ್ಪಂ ||
ಸರಸತಿಯನ್ನಜಮುಖದೊಳ್ ।
ತರುಣಿಯರೊಳ್ಮೋಹವನ್ನು ಬಿಡಲಾಗುವದೇ ॥ ೧೮೩ ॥

ಜಲಮಂ ಕಡೆಯುತ್ತಿರ್ಪುದು ।
ಮಳಲಂ ಗಾಣದಲಿ ಹೊಯ್ದು ತೆಗೆವುದು ನೆಯ್ಯಂ ||
ಕಲಿಸುವದಜ್ಞಗೆ ನೀತಿಯ ।
ಬಲುಕಸುವಿಂ ಗಾಳಿಯನ್ನು ಗುದ್ದಿದ ತೆರದೊಳ್ ॥ ೧೮೪ ॥

ಉರೆಸುಖದಬ್ಬವ ಬಟ್ಟಳಿ ।
ಹೊರಗಿನ ಶೋಭೆಯನು ನೋಡಿ ಕಿಂಶುಕತರುವ ||
ನ್ನೆರಗುವ ತೆರದೊಳ್ಮನುಜಂ ।
ಮರುಳಾಗುವ ಬಾಹ್ಯರಂಗಶೋಭೆಯ ನೋಡಲ್ ॥ ೧೮೫ ॥

ಮರಣದ ಕಾಲದಲೊರ್ಮೆಯೆ ।
ಹರಿಯನ್ನತಿಭಕುತಿಯಿಂದೆ ನೆನೆವಾಮನುಜಂ ॥
ಹರಿಪದಮಂ ಸೇರುತಿಹಂ ।
ಪರಮಾನಂದವನು 'ಹೊಂದಿ ಸುಖದಿಂದಿರ್ಪಂ ॥ ೧೮೬ ॥

ಸಿರಿಯಾವಾಸೇಂ ವಿರಹದೆ ।
ತರುಣೀಮುಖವಿರುವದೆಂತು ಪಡೆವವು ಸುಖಮಂ ॥
ಶರರುಹಗಳೀತರಿಂದಂ ।
ಸರೋಜಿನಿಯುಬಾಡಿರುವುದು ಸೂರ್ಯೋದಯದಿಂ ॥ ೧೮೭ ॥

ಧನಿಕನು ಶ್ರೋತ್ರಿಯು ವೈದ್ಯಂ ।
ಮನುಜೇಶನು ತನ್ನಕುಲಜರಿಂದಾಪುರದೊಳ್ ॥
ದಿನಮಂ ವಾಸವಮಾಡುವ ।
ಪಸುಚಿತಮೆನ್ನುವರು ಗುಣಿಗಳನುಭವದಿಂದಂ ॥ ೧೮೮ ॥

ಜನಕನ ಜನನಿಯ ಸತಿಯಂ ।
ಮನೆಯುಂ ತನುಜಾತರನ್ನು ವೈಭವಮಂಭೋ ॥
ಜನಮಂ ಬಿಟ್ಟಡೆಯುಂ ಶ್ರೀ ।
ಪಸನಾಮಸ್ಮರಣೆಯನ್ನು ತ್ಯಜಿಪರೆ ಸಂತರ್ ॥ ೧೮೯ ॥

ಎಸಿರಿ ಸತ್ಯದ ತಾಣದೆ ।
ವಾಸಿಸುವದು ಕೀರ್ತಿ ಚಾಗವಿರ್ದೆಡೆಯಲ್ಲ ॥
ಭ್ಯಾಸದ ಸ್ಥಾನದೆ ವಿದ್ಯೆಯು ।
ತೋಷದ ಬಳಿಯಲ್ಲಿ ಬುದ್ಧಿ ಕರ್ಮದ ಸ್ಥಳದೊಳ್ ॥ ೧೯೦ ॥

ಪೋಷಿಪ ಕಾರ್ಯದೆ ಜನನಿಯು ।
ತೋಷಿಪ ಕೃತ್ಯದಲಿ ಪತ್ನಿಯಿರ್ಪಳು ಯೋಗ್ಯಳ್ ॥
ಶೋಷಿಪ ಕೃತ್ಯದೆ ಚಿಂತೆಯು ।
ಭೂಷಿಪ ಗೆಯ್ಮೆಯಲಿ ವಿದ್ಯೆಯತಿಶಯ ಯೋಗ್ಯಂ ॥ ೧೯೧ ॥

ಇರುವೆಗಳಾರ್ಜಿಸಿದಾಕಾಳ್ ।
ತಿರುಗುತೆ ಮಕ್ಷಿಕವು ಕೂಡಿಸಿಟ್ಟಹತುಪ್ಪಂ ॥
ಧರೆಯೊಳು ಜೀನನು ಹುಗಿದಿ ।
ಟ್ಟಿರುವ ಧನಂ ಸಕಲನಾಶವಪ್ಪುದು ಸತ್ಯಂ ॥ ೧೯೨ ॥

ಪರಮೇಶ್ವರನಿಗೆ ದುಃಖಿಯು ।
ಕರಮಂ ಮುಗಿಯುವನು ರೋಗಿ ತಪಮಂ ಗೆಯ್ಯಂ ॥
ತರುಣಿಗೆ ವೃದ್ಧಾಪ್ಯವು ಬಂ ।
ದಿರೆ ಹದಿಬದೆಯಹಳು ದಾನವಿಚ್ಛಿಪ ಬಡವಂ ॥ ೧೯೩ ॥

ನರಪತಿಹಿತನಂ ದ್ವೇಷಿಸು ।
ತಿರುವರು ಪ್ರಜರೆಲ್ಲ ಜನರ್ಗೆ ಹಿತಗೆಯ್ವವನಂ ।
ತುರಿಪದಿ ಬಿಡುವ ನರೇಶಂ ।
ನರಪನ ಮೇಣ್ ಜನರ ಹಿತವ ಗೆಯ್ವರ ಕಾಣೆಂ ॥ ೧೯೪ ॥

ಅನವರತಂ ಬೆಣ್ಣೆಗೆ ಭೋ ।
ಜನದಲಿ ಮುಖ್ಯತ್ವವಿರುವ ಕಾರಣದಿಂದಂ ॥
ಮನದೊಳಗಿಹಕೃತ್ಯಂಗಳ ।
ಮನುಜಂ ಬೆಣ್ಣೆಯನುಕೊಟ್ಟು ಸಾಧಿಸಿಕೊಳ್ವಂ ॥ ೧೯೫ ॥

ಇರುತಿರೆ ಕಾಕಪಿಕಂಗಳ್ ।
ಕರಿದಾಗಿಹವರ್ಣದಿಂದೆ ತೋರದು ಭೇದಂ ॥
ಬರೆ ಮಧುಮಾಸಂ ಮಧುರ ।
ಸ್ವರವದು ಪುಟ್ಟುವುದು ಪಿಕರಿ ಕಾಕರ್ಕೆಲ್ಲಂ ॥ ೧೯೬ ॥

ಘನವಂತಗೆ ಬರೆಕಷ್ಟಂ ।
ಜನಪದವರ್ಗಕ್ಕೆ ಮುಂದೆ ಸುಖವಹುದದರಿಂ ॥
ಇನಕುಲಸಂಭವರಾಮನ ।
ವನವಾಸವು ರಾವಣಾಂತಕಾರಣವಲ್ತೇ ॥ ೧೯೭ ॥

ಸಿರಿದೂಟಂ ಕಳವಿಂದಂ ।
ಪರನಾರೀಭೋಗದಿಂದೆ ಕ್ಲೈಬ್ಯಂ ಲೇಸೈ ॥
ಮರಣವು ಲೇಸವಮಾನದೆ ।
ನಿರಯದೊಳಿರಿಲೇಸು ಶುಲ್ಕಜೀವಿತ ॥ ೧೯೮ ॥

ಮಾರಣವು ಭಯದಲಿ ಸೀಮೆಬಿ ।
ಪಿತರಣವು ಗುಣದಲ್ಲಿ ಸೀಮೆ ತಪದಲಿ ಮೋಕ್ಷಂ ॥
ಹರಿಕಥೆಶ್ರವಣದ ಸುಖದೊಳ್ ।
ಸುರಲೋಕವು ಪುಣ್ಯಸೀಮೆ ಕಾವ್ಯಂ ಕಲಿಯೊಳ್ ॥ ೧೯೯ ॥

**ಚಂಪಕ** ॥

ತರಣಿಯು ಭೂಷಣಂ ನಭಕೆ ಸತ್ಯವು ಮಾತಿಗೆ ಷಟ್ಪದಾಳಿ ವಾ ।
ರಿರುಹಕೆ ದಾನ ವೈಭವಕೆ ಮಾರನು ಸುಗ್ಗಿಗೆ ಭೂಷಣಂ ಬುಧಂ ॥
ನರಪಸಭಾಸ್ಥಳಕ್ಕೆ ಬಹುಭೂಷಣ ನಮ್ರವು ಸದ್ಗುಣಕ್ಕೆ ಚಂ ।
ದಿರನತಿಭೂಷಣಂ ನಿಶೆಗೆ ವಾಜಿಗೆ ವೇಗವು ಯೋಗ್ಯ ಭೂಷಣಂ ॥ ೨೦೦ ॥

ಶೀಲಂ ಖಳಸಖನಿಂದಲೆ ।
ಲಾಲನೆಯಿಂದಾತ್ಮಜಾತ ಕೆಡುವಂ ಧರಣಿ ।
ಪಾಲಂ ಕುಮಂತ್ರಿಯಿಂದಂ ।
ಸ್ಖಾಲದೆ ಮರ್ಯಾದೆನಾಶವಪ್ಪುದು ಧರೆಯೊಳ್ ॥ ೨೦೧ ॥

ಗಿರಿಯಲ್ಲಿ ಮಯೂರಗಳಂ ।
ಬರದಲಿ ಮೋಡಗಳು ರವಿಯು ಲಕ್ಷಾಂತರದೊಳ್ ॥
ಸರಸೀರುಹಗಳು ಕೊಳದೊಳ ।
ಗಿರಲೇಂ ರಾಗಕ್ಕೆ ದೂರವೆನ್ನುವದಿಲ್ಲಂ ॥ ೨೦೨ ॥

ಕ್ರೂರವ್ಯಾಘ್ರನಖಂಗಳ್ ।
ಶೂರನು ಕರದಲ್ಲಿ ಪಿಡಿದಶಸ್ತ್ರವು ಶೀಲಾ ।
ನಾರೀಕುಂಭಕುಚಂಗಳ್ ।
ಮಾರಣದಂತ್ಯಕ್ಕೆ ಲಭಿಸುತಿರ್ಪುವು ಪರರೊಳ್ ॥ ೨೦೩ ॥

ಹರಿಗಳು ದಾಡಿಮವೃಕ್ಷದೆ ।
ಹರಿಗಳ ತುದಿಯಲ್ಲಿ ಕಾಣ್ಬ ಬಹುವಣ್ಣಗಳಂ ॥
ಹರಿದು ಮನವಾರೆ ತಿಂದುವಿ ।
ಹರಿಸುತೆ ಪೊಳ್ಳನ್ನು ಕಳೆವವಾವನದೆಡೆಯೊಳ್ ॥ ೨೦೪ ॥

ಉರಗಾಳಿಯಿಂದೆ ಮೂಲಂ ।
ಹರಿಸಂಕುಲದಿಂದೆ ತುದಿಯುಂ ಕುಸುಮಾಳಿಯುಂ ಷ ॥
ಟ್ಚರಣನಿಚಯದಿಂದೆಸೆವುದು ।
ಹರಿಖಗ ಸಂದೋಹದಿಂದೆ ಚಂದನಕುಜದ್ಧಾ ॥ ೨೦೫ ॥

ವಿರಚಿಸುವಂ ಕವಿ ಕಾವ್ಯವ ।
ನರಿವರು ಪಂಡಿತರು ರಸವನಿತರರು ತಿಳಿಯರ್ ॥
ತರುಣಿಯ ಸುಂದರ ರೂಪವ ।
ನೆರೆಯಂ ತಿಳಿವಂತೆ ಪಿತನು ತಿಳಿಯಲಶಕ್ಯಂ ॥ ೨೦೬ ॥

ದುರುಳರು ಶೋಧಿಸುತಿರ್ಪರು ।
ನಿರುತದಿ ರಮಣೀಯ ಕಾವ್ಯದಲಿ ದೋಷಗಳಂ ॥
ವರ ತರುಣಿಯಳಂಗದೆ ವ್ರಣ ।
ವಿರುತಿಹ ಸ್ಥಳವನ್ನೆ ಶೋಧಿಸುವದದು ಮಶಕಂ ॥ ೨೦೭ ॥

ಮನುಜಂ ವಿಶಾಲವಂಶದೆ ।
ಜನಿಸಿದಡೇಂ ವಿದ್ಯೆಯಿಲ್ಲದಿರಲು ನಿರರ್ಥಂ ॥
ಜನವಂದ್ಯಂ ವಿದ್ಯಾವಂ ।
ತನುಕೀಳ್ಜಳಿನಿಯಲ್ಲಿ ಜನನಮಂ ಪೊಂದಿದಡೇಂ ॥ ೨೦೮ ॥

ತಿಳುವಳಿಕೆಯಿಲ್ಲದಿರ್ದಂ ।
ಸುಲಲಿತ ಕಾವ್ಯಗಳನೋದಲೇಂ ವ್ಯರ್ಥಂಕಂ ॥
ಗಳನಾಗಿಹಮನುಜನ ಕರ ।
ದಲಿದರ್ಪಣವೀಯೆ ನೋಡಿಕೊಳ್ವನೆ ಮುಖಮಂ ॥ ೨೦೯ ॥

ತನುವಿಗೆಮಾನವನೀಯರ್ ।
ಧನಯುತದೇಹಕ್ಕೆ ಮಾನವೀವರು ಚಂಡಾ ॥
ಲನ ನೋಡರು ಕಣ್ಣಿಂದಂ ।
ಘನತರಸಿರಿಬರಲಾತನನ್ನು ಸಭೆಯೊಳು ಕರೆವರ್ ॥ ೨೧೦ ॥

ದ್ವಿರದಂ ಬೇಸಗೆ ಬಿಸಿಲೊಳ್ ।
ನೆರಳನ್ನಾಶ್ರಯಿಸಿ ಸೊಂಡೆಯಿಂ ತತ್ಕುಜಮಂ ॥
ಮುರಿದೊಗೆವತೆರದಿ ನೀಚರ್ ।
ಪರರನ್ನಾಶ್ರಯಿಸಿ ಕೊಲ್ವುದಚ್ಚರಿಯಲ್ತೇ ॥ ೨೧೧ ॥

ನರಪಾಬ್ಧಿ ನೃಪಜವನಪುರ ।
ಸರೋವಿವಾಹೇಂದುದೂತಯಾತ್ರಾಸುರತ ॥
ರ್ತುರುಮಧುಪಾನ ಮಂತ್ರ್ಯಗ ।
ವಿರಹಾಜಿಗಳನ್ನೆವರ್ಣಿಸಿರ್ಪುದೆಕಾವ್ಯಂ ॥ ೨೧೨ ॥

**ಉತ್ಪಲ ॥**

ಪೀತನಗಸ್ತ್ಯನಿಂ ಪಿತನು ತಾಡಿತನನ್ಯಮುನೀಂದ್ರಪಾದದಿಂ ।
ನಾಥನು ವೈರಿಯಂ ದ್ವಿಜವರೇಣ್ಯರು ಜಿಹ್ವೆಯೊಳಿಟ್ಟುಕೊಳ್ಳುವರ್ ॥
ಭೇದಿಪರೆನ್ನ ಗೇಹವ ಶಿವಾರ್ಚನೆಗೀಕತದಿಂದೆ ಖಿನ್ನಳಾಂ ।
ಕ್ರೋಧದೆ ಬಿಟ್ಟಿಹೆಂ ಸತತ ವಿಪ್ರಕುಲಾಲಯವನ್ನು ನಾಥನೇ ॥ ೨೧೩ ॥

**ಚಂಪಕ ॥**

ಹರಿ ವನದಲ್ಲಿ ವ್ಯಾಕರಣಕರ್ತೃವ ಪಾಣಿನಿಯನ್ನು ತಿಂದಿತು ।
ದ್ವಿರದವು ಜೈಮಿನೀಂದ್ರನನು ಕೊಂದಿತು ಕಾಲನು ಮೆಟ್ಟಿ ಕೋಪದಿಂ ॥
ಶರಸಿಧಿದಂಡೆಯೊಳ್ಮಕರ ಪಿಂಗಲನನ್ನೆಳಕೊಂಡು ಪೋದುದು ।
ಕೆರಳಿದ ಪ್ರಾಣಿಗಳ್ ಜಗದೊಳಿರ್ಪ ಗುಣಂಗಳ ತಿಳಿಯೆಸಾಧ್ಯಮೇ ॥೨೧೪॥

**ಚಂಪಕ ॥**

ಮದಕರಿಮಾರ್ಗದಿಂ ನಡೆವುದಂಕುಶದಿಂ ಸೃಣಿ ಹಸ್ತಿಮಾತ್ರಮೇ ।
ಚದರುವದಲ್ಲೆಕತ್ತಲೆಯು ದೀಪದೆ ಬೇಡ ದೀಪದಮಾತ್ರಮೇಂ ತಮಂ ॥
ಸದೆವುದು ವಜ್ರವದ್ರಿಯನು ವಜ್ರದ ಗಾತ್ರಮೆಪರ್ವತಂ ಕ್ಷಣಾ ।
ರ್ಧದೆಬಲವಂತನಂ ಗೆಲುವದಚ್ಚರಿಯಲ್ಲವೆ ತೇಜಯುಕ್ತನು ॥ ೨೧೫ ॥

—*—

# ಒಪ್ಪೋಲೆ



| ಪುಟ. | ಕ. ನಂ. | ತಪ್ಪು | ಒಪ್ಪು |
|---|---|---|---|
| ೩ | ೧೧ | ಕಟ್ಟವ | ಕಟ್ಟಿದ |
| ೭ | ೨೬ | ಯಂಕೈಕೊಳ್ಳುವೆ | ಯನ್ನು ಕೈಕೊಳ್ಳುವ |
| ೧೪ | ೨೦ | ರೆನ್ನೂತ | ರೆನ್ನುತ |
| ೩೧ | ೬ | ನಾಶಕಾರಣಂ | ಈ ಶಬ್ದ ಬಿಟ್ಟು ಓದಿ |
| ೪೩ | ೩ | ತನೂಭವ | ತನುಭವ |
| ೪೬ | ೧೭ | ಹರಿಯುವ | ಹರಿಯು |
| ೪೬ | ೧೯ | ವಾವವಸಾದಂ | ವಾಮನನಾದಂ |
| ೫೪ | ೬೭ | ಪರವೀಡೆ | ಪರಪೀಡೆ |
| ೬೩ | ೧೧೨ | ಶನ್ಯೈಶ್ವರ | ಶನ್ಯೈಶ್ವರ |
| ೬೫ | ೧೨೬ | ಕಿರುವದು (ಮಂತ್ರವು) ಪನ್ನಗ | ಮಂತ್ರವು ಪನ್ನಗ |
| ೬೫ | ೧೨೬ | ರಿರು | ಕಿರು |
| ೭೨ | ೧೬೦ | ಸೀತ | ಸ್ಥಿತ |
| ೭೮ | ೧೯೬ | ಕಾಕರ್ಕೈಲ್ಲಂ | ಕಾಕಕ್ಕೈಲ್ಲಂ |
| ೭೯ | ೧೯೯ | ಸೀಮೆಬಿ | ಸೀಮೆ ವಿ |
| ೭೯ | ೧೯೯ | ವಿತರಣವು | ತರಣವು |
| ೭೯ | ೨೦೧ | ಸಖನಿಂದಲಿ | ಸಖನಿಂದಂ |
| ೭೯ | ೨೦೧ | ಧರಣಿ | ಧರಣೀ |
| ೮೦ | ೨೦೮ | ಕೀಳ್ಗಳಿನಿ | ಕೀಳ್ಗಳಿ |